

## ಹೆಚ್. ಎ. ಮಂತಟ್ಟಿ

1969ರಲ್ಲಿ ಚಿಂಚೋಳಿಯಲ್ಲಿ ಜನಿಸಿದ ಶ್ರೀ ಹೆಚ್. ಎ. ಮಂತಟ್ಟಿ ಅವರು ಕಲ್ಬುರ್ಗಿಯ ದೃಶ್ಯಕಲೆಯ ಕಾಲೇಜಿನಿಂದ ಎಮ್.ಎಫ್.ಎ. ಪದವಿಯನ್ನು 1993 ರಲ್ಲಿ ಪಡೆದವರು. ಶಾಂತಿನಿಕೇತನದಲ್ಲಿ 1998ರಲ್ಲಿ ನಡೆದ ಲಲಿತಕಲೆಯ ಕೋರ್ಸಿನಲ್ಲಿ ಭಾಗವಹಿಸಿದವರು. 1987ರಿಂದ ಸತತವಾಗಿ ಹಲವಾರು ಚಿತ್ರಪ್ರದರ್ಶನ ಗಳಲ್ಲಿ ಇವರ ಚಿತ್ರಗಳು ಪ್ರದರ್ಶಿತವಾಗಿವೆ. ಇವರ ಕೃತಿಗಳು ಕಲ್ಬುರ್ಗಿಯ ಐಡಿಯಲ್ ಫೈನ್ ಆರ್ಟ್ ಸೊಸೈಟಿ, ಹಂಪಿಯ ಕನ್ನಡ ವಿಶ್ವವಿದ್ಯಾಲಯ, ಶಾಂತಿನಿಕೇತನದ ವಿಶ್ವಭಾರತಿ ವಿಶ್ವವಿದ್ಯಾಲಯ, ಸಿಆರ್‌ವೈ ಬೆಂಗಳೂರು, ಕರ್ನಾಟಕ ಲಲಿತ ಕಲಾ ಅಕಾಡೆಮಿ ಇವುಗಳ ಸಂಗ್ರಹಗಳಲ್ಲಿವೆ. ಸಧ್ಯ ಕಲ್ಬುರ್ಗಿಯ ಐಡಿಯಲ್ ಫೈನ್ ಆರ್ಟ್ ಸಂಸ್ಥೆಯಲ್ಲಿ ಉಪನ್ಯಾಸಕರಾಗಿ ಕೆಲಸ ಮಾಡುತ್ತಿರುವ ಶ್ರೀ ಮಂತಟ್ಟಿ ಯವರು ಹೈದ್ರಾಬಾದ್ ಕರ್ನಾಟಕದ ಪ್ರತಿಭಾವಂತ ಯುವ ಕಲಾವಿದರಲ್ಲಿ ಒಬ್ಬರು. ಇವರು ಕಲಾಕ್ಷೇತ್ರದಲ್ಲಿ ತುಂಬಾ ಭರವಸೆಯನ್ನು ಹುಟ್ಟಿಸಿದ್ದಾರೆ.

— ಡಾ|| ಹೆಚ್. ಚಂದ್ರಶೇಖರ

# ಶಾಂತಲಿಂಗಪ್ಪಾ ಪಾಟೀಲ
# SHANTHLINGAPPA PATIL

ಹೆಚ್. ವಿ. ಮಂತಟ್ಟಿ
**H. V. MANTHATTI**



ಕರ್ನಾಟಕ ಲಲಿತಕಲಾ ಅಕಾಡೆಮಿ
**Karnataka Lalithakala Academy**

SHANTHALINGAPPA PATIL : A Biography by H. V. Manthatti published by H. Shankarappa, Registrar Karnataka Lalithalaka Academy, Kannada Bhavan, J. C. Road, Bangalore - 560 002

Pages : 72

First Impression : 2000

@ : KLKA

**Price : Rs. 25/-**

ಪ್ರಧಾನ ಸಂಪಾದಕರು :
ಪ್ರೊ|| ಅಂದಾನಿ ಎ. ಜಿ.

ಪ್ರಕಟಣಾ ಸಮಿತಿ :
ಶ್ರೀ ಚಿ. ಸು. ಕೃಷ್ಣಸೆಟ್ಟಿ
ಶ್ರೀ ಆರ್. ಜಿ. ರಾಯ್ಕರ್
ಶ್ರೀ ರಾಜೇಂದ್ರ ಅಷ್ಟಗಿ
ಶ್ರೀ ಅಶೋಕ್ ಟಿ. ಅಕ್ಕಿ
ಶ್ರೀಮತಿ ಬಾನುಮುನಾಫ್

ಪ್ರಕಾಶಕರು :
ಎಚ್. ಶಂಕರಪ್ಪ,
ರಿಜಿಸ್ಟ್ರಾರ್

ಅನುವಾದ : ಡಾ|| ಬಿ. ಎನ್. ಚಂದ್ರಯ್ಯ

ಮುದ್ರಕರು : ಅನುಭವ ಪ್ರಿಂಟರ್ಸ್
1213, 5ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು - 560 010
ದೂರವಾಣಿ : 3401577, 2204868

# ಅಧ್ಯಕ್ಷರ ಮಾತು

ಕರ್ನಾಟಕ ಲಲಿತಕಲಾ ಅಕಾಡೆಮಿಯು ಕಳೆದ ೩೬ ವರ್ಷಗಳಿಂದ ಲಲಿತ ಕಲೆಗೆ ಸಂಬಂಧಪಟ್ಟ ಪ್ರಕಟಣೆಗಳನ್ನು ಪ್ರಕಟಿಸುತ್ತಾ ಬಂದಿದೆ. ಈ ಪ್ರಕಟಣೆಗಳು ಹಲವು ರೀತಿಯಲ್ಲಿ ಉಪಯುಕ್ತವೆನಿಸುತ್ತವೆ. ಈ ಪ್ರಕಟಣೆಗಳ ಮಾಲೆಯಲ್ಲಿ ಕಲಾವಿದರನ್ನು ಕುರಿತ ಪುಸ್ತಕಗಳು ಅತ್ಯಂತ ಪ್ರಮುಖ. ಈ ಪ್ರಕಟಣೆಗಳು ಆಯಾ ಕಲಾವಿದನ ಜೀವನ ಮತ್ತು ಸಾಧನೆಯನ್ನು ಚಿತ್ರಿಸುವುದಲ್ಲದೆ ಆಯಾ ಕಾಲಘಟ್ಟದ ಕಲೆಯ ಸ್ಥಿತಿಗತಿಗಳನ್ನು ಚಿತ್ರಿಸುತ್ತವೆ. ಅಂದರೆ ಕಲಾ ಇತಿಹಾಸವನ್ನು ಈ ಕೃತಿಗಳು ಕಟ್ಟಿಕೊಡುತ್ತವೆ. ಈ ಕೃತಿಗಳು ಕನ್ನಡಿಗರಿಗೆ ಅಷ್ಟೇ ಅಲ್ಲದೆ ಕನ್ನಡೇತರರಿಗೂ ಉಪಯುಕ್ತವಾಗಲೆಂದು ಇಂಗ್ಲೀಷ್‌ನ ಭಾಷಾಂತರದೊಂದಿಗೆ ಪ್ರಕಟಿಸುತ್ತಿದ್ದೇವೆ. ಇದರಿಂದ ಕನ್ನಡೇತರರಿಗೆ ಕರ್ನಾಟಕದ ಕಲೆ ಮತ್ತು ಕಲಾವಿದರನ್ನು ಪರಿಚಯಿಸಿ ಕೊಟ್ಟಂತಾಗುತ್ತದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಕೃತಿ ಶಾಂತಲಿಂಗಪ್ಪ ಪಾಟೀಲರ ಜೀವನ ಮತ್ತು ಸಾಧನೆಯನ್ನು ಚಿತ್ರಿಸುತ್ತದೆ. ದಿ|| ಪಾಟೀಲರು ಹೈದ್ರಾಬಾದ್‌ಕರ್ನಾಟಕವು ಕಂಡ ಪ್ರತಿಭಾವಂತ ಕಲಾವಿದರಲ್ಲಿ ಒಬ್ಬರು. ಸ್ವಾತಂತ್ರ್ಯ ಪೂರ್ವದ ಕಲಾಪರಂಪರೆಯಲ್ಲಿ ಪಾಟೀಲರದು ದೊಡ್ಡ ಹೆಸರು. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ವ್ಯಕ್ತಿಯಾಗಿದ್ದ. ಇವರ ಹೆಸರು ಇತ್ತೀಚಿನ ಕಲಾವಿದರಿಗೆ ಅಷ್ಟು ಪರಿಚಿತವಿಲ್ಲ. ಈ ಕೊರತೆಯನ್ನು ಸ್ವತಃ ಕಲಾವಿದರಾದ ಶ್ರೀ ಹೆಚ್. ವಿ. ಮಂತಟ್ಟಿಯವರು ಶ್ರಮವಹಿಸಿ ತುಂಬಿ ಕೊಟ್ಟಿದ್ದಾರೆ. ಮರೆತು ಹೋಗಿದ್ದ ಮಹಾನುಭಾವರೊಬ್ಬರನ್ನು ಕನ್ನಡಿಗರಿಗೆ ಪರಿಚಯಿಸಿದ್ದಾರೆ. ಶ್ರೀ ಮಂತಟ್ಟಿ ಅವರನ್ನು ನಾನು ಇದಕ್ಕಾಗಿ ಅಭಿನಂದಿಸುತ್ತೇನೆ.

ಈ ಪುಸ್ತಕದ ಹಸ್ತಪ್ರತಿಗಳನ್ನು ಮತ್ತು ಮುದ್ರಣದ ಕರಡುಗಳನ್ನು ಹಲವು ಬಾರಿ ತಿದ್ದಿ ಚೆಂದಗೊಳಿಸಿದ ಅಕಾಡೆಮಿಯ ಸದಸ್ಯರಾದ ಡಾ॥ ಹೆಚ್. ಚಂದ್ರಶೇಖರ ಅವರನ್ನು ನಾನು ಅಕಾಡೆಮಿಯ ಪರವಾಗಿ ವಂದಿಸುತ್ತೇನೆ. ಈ ಪುಸ್ತಕವನ್ನು ಮುದ್ರಿಸಿದ ಅನುಭವ ಮುದ್ರಣಾಲಯದವರಿಗೆ ಮತ್ತು ಅಕಾಡೆಮಿಯ ರಿಜಿಸ್ಟ್ರಾರ್ ಆದ ಶ್ರೀ ಶಂಕರಪ್ಪನವರಿಗೆ ಕೃತಜ್ಞತೆಗಳು. ಈ ಕೃತಿಯನ್ನು ಕಲಾವಿದರು ಸ್ವಾಗತಿಸುತ್ತಾರೆಂದು ನಂಬುತ್ತೇನೆ.

ಬೆಂಗಳೂರು
೧೮-೪-೨೦೦೦

ಪ್ರೊ. ಅಂದಾನಿ ಎ. ಜಿ.
ಅಧ್ಯಕ್ಷರು

## CHAIRMAN'S WORDS

The Karnataka Lalithakala Academy, since thirty six years has been publishing several books related to art. These publications have been useful in many ways. In this series of publications, books on life and achievements of individual artists have been very important more than one way. These books, not only depict the life and achievements of individual artist but also describe the historical situations in the field of art of a particular period. These books are published both in Kannada and English so that the Kannadigas and the non-Kannadigas can acquant themselves of the art and artists of Karnataka.

As seen from this backgound the present book is an important publication which describes the life and the achievements of late Shri Shantalingappa Patil, was not only one of the talented artists but also a freedom fighter of the Hyderabad Karnataka of pre-independence period. Patil is not very much known to many artists and art lovers of the present generation. This gap has been ably bridged by Shri H. V. Manthatti, himself a talented artist of the same region. I congratulate Shri Manthatti for his pains-taking work and for rediscovering a great man who was forgotten by the younger generation.

Dr. H. Chandrashekhar, a Member of the Academy has pains-takingly corrected not only the

manuscripts but also the proofs several times. He has supervised the printing work. I thank him on behalf of the Academy. I thank Shri Shankarappa, the Registrar of the Academy and the Anubhava Printers for the nice printing.

I hope this book will be well received by the artists and art lovers alike.

Bangalore,
18-4-2000

Prof. Andani V. G.
Chairman



# ಶಾಂತಲಿಂಗಪ್ಪಾ ಪಾಟೀಲ

# ಶಾಂತಲಿಂಗಪ್ಪಾ ಪಾಟೀಲ

ಹೈದ್ರಾಬಾದ ಕರ್ನಾಟಕದ ಪ್ರಮುಖ ನಗರ ಕಲಬುರ್ಗಿ ಹಿಂದುಳಿದ ಪ್ರದೇಶದ ನಗರವಾದರೂ ಸಾಂಸ್ಕೃತಿಕವಾಗಿ ತನ್ನದೇ ಆದ ಸ್ಥಾನವನ್ನು ಈ ನಗರ ಹೊಂದಿದೆ. ಕಲೆ ಇಲ್ಲಿಯ ಜನಸಾಮಾನ್ಯರ ದಿನನಿತ್ಯದ ಬದುಕಿನಲ್ಲಿ ಹಾಸು ಹೊಕ್ಕಾಗಿ ಬೆರೆತುಕೊಂಡಿದೆ. ಐತಿಹಾಸಿಕವಾಗಿ ಈ ಪ್ರದೇಶ ರಾಷ್ಟ್ರಕೂಟರ, ಚಾಲುಕ್ಯರ, ಬಹಮನಿಗಳ ಸಾಮ್ರಾಜ್ಯದ ಆಳ್ವಿಕೆಗೊಳಪಟ್ಟಿತ್ತು. ಆ ಸಮಯದಲ್ಲಿ ನಿರ್ಮಾಣವಾದ ಕೆಲವು ಅಪೂರ್ವ ಕಲಾಕೃತಿಗಳ ಅವಶೇಷಗಳು ಇಂದು ನಮ್ಮೆದುರಿಗಿದ್ದು, ಆಗಿನ ಕಾಲದ ಕಲಾ ವೈಭವಕ್ಕೆ ಸಾಕ್ಷಿಯಾಗಿ ನಿಂತಿವೆ.

ಇಂಥ ಸಿರಿತನದ ಕಲಬುರ್ಗಿ, ಕಲಾ ಪ್ರಪಂಚಕ್ಕೆ ಅನೇಕ ಕಲಾವಿದರನ್ನು ಕೊಡುಗೆಯಾಗಿ ನೀಡಿದೆ. ಅಕ್ಕುಜಾ, ಮಹಾಂಕಾಳರಂತಹ ಮಹಾರಾಜರ ಆಶ್ರಯದಲ್ಲಿದ್ದ ಕಲಾವಿದರಿಂದ ಹಿಡಿದು ಇಂದಿನ ನವ್ಯ ಯುಗದ ಯುವ ಕಲಾವಿದರವರೆಗೂ ಈ ಪರಂಪರೆ ಬೆಳೆದು ಬಂದಿದೆ. ಈ ಪರಂಪರೆಯನ್ನು ಬೆಳೆಸಿಕೊಂಡು ಬಂದವರಲ್ಲಿ ಶಾಂತಲಿಂಗಪ್ಪಾ ಪಾಟೀಲರು ಪ್ರಮುಖರು.

## ಮನೆತನ ಮತ್ತು ಜನನ

ಕಲಬುರ್ಗಿ ಜಿಲ್ಲೆಯ ಆಳಂದ ತಾಲೂಕಿನ ನಿಂಬಾಳ ಗ್ರಾಮ ಶಾಂತಲಿಂಗಪ್ಪನವರ ಜನ್ಮ ಸ್ಥಳ. ಪಾಟೀಲರು, ಗಿರೆಪ್ಪಾ ಹಾಗೂ ನಿಂಗವ್ವಾ ಎಂಬ ದಂಪತಿಗಳ ಹೊಟ್ಟೆಯಲ್ಲಿ ೧೮೮೨ರಲ್ಲಿ

ಎರಡನೆಯುವರಾಗಿ ಜನಿಸಿದರು. ತಂದೆ ಗಿರೆಪ್ಪಾ, ನಿಂಬಾಳ ಗ್ರಾಮುದವರಾಗಿದ್ದರು. ಒಕ್ಕಲುತನವೇ ಇವರ ವೃತ್ತಿಯಾಗಿತ್ತು. ಸತ್ಯ ನಿಷ್ಠೆಯಿಂದ ಕೂಡಿದ ತಂದೆ, ಧರ್ಮ ಪಾರಾಯಣಿಯಾದ ತಾಯಿ, ಇಂಥವರ ವಾತ್ಸಲ್ಯದಲ್ಲಿ ಶಾಂತಲಿಂಗಪ್ಪನವರ ಜೀವನದ ಮೊದಲ ಅಧ್ಯಾಯ ಪ್ರಾರಂಭವಾಗಿತ್ತು.

ಶ್ರೀಮಂತರ ಕುಟುಂಬದಲ್ಲಿ ಜನಿಸಿದ ಶಾಂತಲಿಂಗಪ್ಪನವರ ಬಾಲ್ಯ ಸುಖದಲ್ಲಿಯೇ ಕಳೆಯಿತು. ತಂದೆ ಊರಿನ ಗೌಡರು. ಕೂತು ಉಂಡರೂ ಸವೆಯಲಾರದಷ್ಟು ಆಸ್ತಿ. ಸುತ್ತಲಿನ ಊರುಗಳಿಗೆ ಇವರ ಮನೆತನ ಹೆಸರುವಾಸಿಯಾಗಿತ್ತು. ಸುಖದ ಸುಪ್ಪತ್ತಿಗೆಯಲ್ಲಿ ಬೆಳೆಯುತ್ತಲಿದ್ದ ಬಾಲಕ ಶಾಂತಲಿಂಗಪ್ಪನವರಿಗೆ ತಾಯಿ ನಿಂಗಮ್ಮನವರ ಮುಖಾಂತರ ಕಲಾದೇವಿಯ ದರ್ಶನ-ವಾಗತೊಡಗಿತು. ಇವರ ತಾಯಿ ಮಣ್ಣಿನ ಗೊಂಬಿಗಳನ್ನು ತಯ್ಯಾರಿಸಿ ಬಾಲಕನ ಮನ ರಂಜಿಸಲು ಪ್ರಯತ್ನ ಮಾಡುತ್ತಿದ್ದರು. ಮನೋರಂಜನೆಯ ವಸ್ತುಗಳನ್ನಾಗಿ ಬಳಸುತ್ತಿದ್ದರೂ ಶಾಂತಲಿಂಗಪ್ಪನವರ ಮನದಲ್ಲಿ ಈ ಬೊಂಬೆಗಳು ಗಾಢವಾದ ಪರಿಣಾಮುವನ್ನು ಬೀರ ಲಾರಂಭಿಸಿದವು. ಬರುಬರುತ್ತ ಮಣ್ಣಿನಿಂದ ಆಡುವ ಹವ್ಯಾಸ ಬೆಳೆಸಿಕೊಂಡ ಇವರು ತಮ್ಮ ಎಳೆಯ ಕೈಗಳಿಂದ ಅನೇಕ ಬೊಂಬೆಗಳನ್ನು ರಚಿಸಿ ಆನಂದಪಡುತ್ತಿದ್ದರು. ಕೇವಲ ಸಮಯ ಕಳೆಯಲು ಅಥವಾ ಮನಸ್ಸನ್ನು ಮುದಗೊಳಿಸಲು ಗೊಂಬೆಗಳ ರಚನೆಯಲ್ಲಿ ತೊಡಗುತ್ತಿದ್ದ ಪಾಟೀಲರ ಮನಸ್ಸು ಅವರಿಗರಿವಿಲ್ಲದಂತೆ ಕಲೆಯ ಕಡೆ ವಾಲುತ್ತಿತ್ತು. ಎತ್ತು, ಕುದುರೆ, ಆನೆ, ಪಕ್ಷಿ ಹೀಗೆ ಅನೇಕ ಪ್ರಾಣಿ ಪಕ್ಷಿಗಳ ಗೊಂಬೆಗಳನ್ನು

ರಚಿಸುವ ಪ್ರಯತ್ನದಲ್ಲಿಯೇ ತಮ್ಮ ಬಾಲ್ಯದ ದಿನಗಳನ್ನು ಕಳೆದ ಪಾಟೀಲರು ಚಿತ್ರಗಳನ್ನು ಸಹ ರಚಿಸುತ್ತಿದ್ದರು. ತಾಯಿ ಹುಣ್ಣಿಮೆ ಪೂಜೆ ಮಾಡುವಾಗ ಪಾಟೀಲರು ಪಾಲ್ಗೊಂಡು ಹುಣ್ಣಿಮೆಯ ಸೊಬಗನ್ನು ಅನುಭವಿಸಿ, ಮರುದಿವಸ ಗೋಡೆಯ ಮೇಲೆ ಆ ಚಿತ್ರವನ್ನೇ ಚಿತ್ರಿಸಿ, ತನ್ನ ತಾಯಿಗೆ "ಅಮ್ಮಾ ನೋಡು ನಾನು ಚಂದಿರನನ್ನು ಬಿಡಿಸಿದ್ದೇನೆ. ನೀನು ಈ ಚಂದಿರನನ್ನೇ ಪೂಜೆಮಾಡು". ಎಂದು ಹೇಳುತ್ತಿದ್ದರಂತೆ. ಈ ಘಟನೆಗಳು ಸಾಂದರ್ಭಿಕವಾಗಿ ಮೂಡಿಬಂದಿದ್ದರೂ ಬಾಲಕ ಪಾಟೀಲರಿಗೆ ಇವೆಲ್ಲಾ ಪ್ರೇರಣೆ ಎಂದು ಹೇಳಬಹುದು.

ಪಾಟೀಲರಿಗೆ ಚಿತ್ರ ಕಲೆಯಲ್ಲಿ ಆಸಕ್ತಿ ದಿನೇ ದಿನೇ ಬೆಳೆದು ಹೆಮ್ಮರವಾಗಲಾರಂಭಿಸಿತು. ಕೃಷಿಗೆ ಪ್ರಾಮುಖ್ಯತೆ ಇರುವ ತನ್ನೂರಿನಲ್ಲಿ ಹಚ್ಚ ಹಸಿರ ಹೊಲಗಳು, ಗಿಡಮರಗಳು, ಪಕ್ಷಿಗಳ ಇಂಚರ ಇವೆಲ್ಲವನ್ನು ಆಸ್ವಾದಿಸುತ್ತಾ ಪ್ರಕೃತಿಯ ಮಡಿಲಲ್ಲಿ ತಲ್ಲೀನರಾಗುತ್ತಿದ್ದರು.

ಪಾಟೀಲರು ಸ್ವಭಾವತಃ ಮುಗ್ಧ ಮನಸ್ಸಿನವರು. ಇವರು ಬಾಲಕರಾಗಿರುವಾಗ ಮಾತನಾಡುವ ಶೈಲಿ ಎಲ್ಲರನ್ನು ಮಂತ್ರಮುಗ್ಧನನ್ನಾಗಿಸುತ್ತಿತ್ತು. ಪ್ರತಿಯೊಂದು ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡು ಅದರ ಅನುಭವವನ್ನು ಪಡೆಯುವ ದಿಸೆಯಲ್ಲಿ ಹೆಜ್ಜೆ ಇಡುತ್ತಿದ್ದರು. ಭಾರತೀಯ ಸಂಸ್ಕೃತಿಯನ್ನು ಅಷ್ಟೇ ಆಳವಾಗಿ ಪ್ರೀತಿಸುತ್ತಿದ್ದರು. ಜೀವನದ ಪ್ರಾರಂಭದಲ್ಲಿ ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳನ್ನೇ ಕಥೆಗಳ ರೂಪದಲ್ಲಿ ಕೇಳಿ ಅವುಗಳಿಂದ ಪ್ರಭಾವಿತರಾದರು.

ಪಾಟೀಲರಿಗೆ ತಮ್ಮೂರಿನ ಕುಂಬಾರನ ಮನೆ ವಿಶೇಷವಾಗಿ ಆಕರ್ಷಿಸಿತ್ತು. ಕುಂಬಾರರ ಮನೆಯ ವಾತಾವರಣ, ಸಾಲಾಗಿ ಪೇರಿಸಿರುವ ಗಡಿಗೆಗಳು, ಬೆಂದು ಹೊರಬರಲು ಸಿದ್ಧವಾಗಿರುವ ಹಸಿ ಗಡಿಗೆಗಳ ಸಾಲು, ಗಡಿಗೆ ಸಿದ್ಧಪಡಿಸಲು ಬಳಸುವ ಹದವಾದ ಮಣ್ಣು ಇನ್ನಿತರ ವಸ್ತುಗಳ ವಿನ್ಯಾಸ ಹಾಗೂ ಪ್ರಮುಖವಾಗಿ ಕುಂಬಾರರ ಮನೆಯ ಅಂಗಳದಲ್ಲಿಯ ತಿಗರಿಯ ಚಲನೆ ಹಾಗೂ ಅದರ ಮೇಲಿರುವ ಹಸಿ ಮಣ್ಣು, ಚಕ್ರ ಉರುಳುತ್ತಿದ್ದಂತೆ ಕುಂಬಾರರ ಕಲಾತ್ಮಕ ಕೈಗಳು ಸೋಂಕಿದೊಡನೆ ಸುಂದರ ರೂಪ ತಳೆಯುವ ಬಗೆ ಶಾಂತಲಿಂಗಪ್ಪನವರನ್ನು ಅತಿಯಾಗಿ ಆಕರ್ಷಿಸುತ್ತಿದ್ದವು.

ಇವೆಲ್ಲವನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಪಾಟೀಲರ ತಂದೆಯವರು ಮಗನಲ್ಲಿದ್ದ ಕಲಾ ಅಂಕುರಕ್ಕೆ ಪೋಷಣೆಯನ್ನಿತ್ತರು.

## ವ್ಯಾಸಂಗ ಹಾಗೂ ಜೀವನ

ಸುಂದರ ಪರಿಸರದಲ್ಲಿ ಕಾಲಕಳೆಯುತ್ತಿರುವ ಬಾಲಕ ಪಾಟೀಲರಿಗೆ ಹುಟ್ಟೂರನ್ನು ತೊರೆದು ಪ್ರಾಥಮಿಕ ಅಭ್ಯಾಸಕ್ಕೋಸ್ಕರ ಮುಂಬಯಿ ಹತ್ತಿರವಿರುವ ಪನವೇಲಗೆ ಹೋಗಬೇಕಾಯಿತು. ಪನವೇಲ, ಪಾಟೀಲರ ಮಾವನವರ ಊರಾಗಿತ್ತು. ಎಲ್ಲವನ್ನು ಸರಳವಾಗಿ ಸ್ವೀಕರಿಸುತ್ತಿದ್ದ ಪಾಟೀಲರಿಗೆ ಹೊಸ ವಾತಾವರಣ ಅರಗಿಸಿಕೊಳ್ಳಲು ಕಷ್ಟವಾಗಲಿಲ್ಲ. ಪ್ರಾಥಮಿಕ ಹಂತ ಮುಗಿಸಿ ಪ್ರೌಢಶಾಲೆಗೆ ಪಾದಾರ್ಪಣೆ ಮಾಡಿದಾಗ ಇವರ ಕಲಾ ಚಿಂತನೆಗೂ ಪ್ರೌಢತೆಯ ಗಾಳಿ

ಸೋಕಲಾರಂಭಿಸಿತು. ಪಾಟೀಲರ ಮಾವ ಆತ್ಮಾರಾಮರವರು ಪನವೇಲಿನಲ್ಲಿ ದೊಡ್ಡ ವ್ಯಾಪಾರಿಗಳಾಗಿದ್ದರಲ್ಲದೆ ಸಮಾಜದಲ್ಲಿ ಘನತೆ ಗೌರವಗಳನ್ನು ಹೊಂದಿದವರಾಗಿದ್ದರು. ಪಾಟೀಲರನ್ನೂ ತಮ್ಮ ವ್ಯವಹಾರದಲ್ಲಿ ತೊಡಗಿಸಿಕೊಳ್ಳುವ ಬಯಕೆ ಇವರದಾಗಿತ್ತು. ಆದರೆ ಪಾಟೀಲರ ಒಲವು ಕಲೆಯ ಕಡೆಗಿರುವುದನ್ನು ಗಮನಿಸಿ, ಭಾರತದ ಖ್ಯಾತ ಕಲಾ ಶಾಲೆಯಾದ ಸರ್. ಜೆ. ಜೆ. ಸ್ಕೂಲ್ ಆಫ್ ಆರ್ಟನಲಿ ಕಲೆಯಲ್ಲಿ ಉನ್ನತ ಶಿಕ್ಷಣಕ್ಕಾಗಿ ಪ್ರವೇಶ ದೊರಕಿಸಿ ಕೊಟ್ಟರು.

ಜೆ. ಜೆ. ಸ್ಕೂಲ್ ಆಫ್ ಆರ್ಟ್, ಆ ಸಮಯದಲ್ಲಿ ಭಾರತದ ಪ್ರಮುಖ ಕಲಾ ಶಾಲೆ ಎಂದು ಗುರುತಿಸಿಕೊಂಡಿತ್ತು. ಇಂತಹ ಪ್ರಖ್ಯಾತ ಕಲಾ ಶಾಲೆಯಲ್ಲಿ ವ್ಯಾಸಂಗ ಮಾಡಲು ಅವಕಾಶ ದೊರೆತದ್ದು ಪಾಟೀಲರಿಗೆ ವರದಾನವಾಗಿತ್ತು. ಇಲ್ಲಿಂದ ಅವರ ಕಲಾರಾಧನೆಗೆ ನಿಜವಾದ ಅರ್ಥದಲ್ಲಿ ಚಾಲನೆ ದೊರೆತಂತಾಯಿತು.

ಶಾಂತಲಿಂಗಪ್ಪನವರು ಸೃಜನಶೀಲ ವ್ಯಕ್ತಿಯಾಗಿದ್ದರು. ಕೇವಲ ಒಂದೇ ಕ್ಷೇತ್ರ ಅಥವಾ ವಿಷಯವನ್ನು ನಂಬಿ ಕುಳಿತವರಲ್ಲ ಎಂದು ಅವರ ವ್ಯಕ್ತಿತ್ವವನ್ನು ಪರಿಶೀಲಿಸಿದಾಗ ವ್ಯಕ್ತವಾಗುತ್ತದೆ. ಚಿತ್ರಕಲೆ ಇವರ ಅಭ್ಯಾಸ ವಸ್ತುವಾದರೂ, ಶಿಲ್ಪ ಕಲೆಯಲ್ಲಿಯೂ ಅಷ್ಟೇ ಗಂಭೀರವಾಗಿ ತೊಡಗಿಸಿಕೊಂಡಿದ್ದರು.

ಶಿಲ್ಪಕಲೆಯಲ್ಲಿ ಅಥವಾ ಮೂರ್ತಿ ರಚನೆಯಲ್ಲಿ ಇವರು ತೊಡಗಲು ಮುಂಬಯಿಯ ಮೂರ್ತಿಕಾರರಾದ ಫಡಕೆ ಎಂಬ ಮೂರ್ತಿಕಾರರ ಪರಿಚಯವೇ ಕಾರಣವಾಗಿತ್ತು. ಫಡಕೆ

ಮುಂಬೈಯಲ್ಲಿ ಪ್ಲಾಸ್ಟರ್‌ನಲ್ಲಿ ಮೂರ್ತಿಗಳನ್ನು ಮಾಡುವಲ್ಲಿ ಸಿದ್ಧ ಹಸ್ತರು. ಇವರ ಪ್ರೀತಿಯನ್ನು ಗಳಿಸಿದ ಪಾಟೀಲರಿಗೆ ಪ್ಲಾಸ್ಟರನಲ್ಲಿ ಮೂರ್ತಿಗಳನ್ನು ರಚಿಸುವ ಕಲೆ ಕರಗತವಾಗುವಲ್ಲಿ ಸಹಾಯಕಾರಿಯಾಯಿತು. ಚಿತ್ರ ಹಾಗೂ ಶಿಲ್ಪ ಅಭಿವ್ಯಕ್ತಿಯ ಬೇರೆ ಬೇರೆ ಮಾಧ್ಯಮಗಳಾಗಿದ್ದರೂ, ಪಾಟೀಲರು ಎರಡನ್ನು ಕರಗತ ಮಾಡಿಕೊಂಡಿದ್ದರು.

ಆಗಿನ ಕಾಲದ ಚಿತ್ರಕಲಾ ಕ್ಷೇತ್ರದ ದಿಗ್ಗಜರಲ್ಲಿ ಹಲದನಕರ್‌ರು ಪ್ರಮುಖರು. ಇವರನ್ನು ಕಲಾಕ್ಷೇತ್ರಕ್ಕೆ ಸಂಬಂಧಪಟ್ಟವರು ಇಂದಿಗೂ ಆದರಣೀಯವಾಗಿ ಸ್ಮರಿಸಿಕೊಳ್ಳುತ್ತಾರೆ. ಇಂತಹ ಹಿರಿಯ ಕಲಾವಿದರ ಗರಡಿಯಲ್ಲಿ ಕಲಾರಾಧನೆ ಮಾಡುವ ಅವಕಾಶ ಪಾಟೀಲರಿಗೆ ಒದಗಿತು. ಹಲದನಕರ್‌ರವರು ಇವರಲ್ಲಿ ಇರುವ ಪ್ರತಿಭೆಯನ್ನು ಗುರುತಿಸಿ, ಪ್ರೋತ್ಸಾಹಿಸಿದರು. ಜೆ. ಜೆ. ಕಲಾಶಾಲೆಯಿಂದ ಚಿನ್ನದ ಪದಕ ಪಡೆದ ಶ್ರೇಯಸ್ಸು ಪಾಟೀಲರದು.

ಚಿತ್ರ ಕಲೆಯನ್ನು ಕೇವಲ ಅಕಾಡೆಮಿಕ್ ಶೈಲಿಯಲ್ಲಿ ಸ್ವೀಕಾರ ಮಾಡುತ್ತಿದ್ದ ಆ ಸಂದರ್ಭದಲ್ಲಿ ಕಲಾವಿದ ಅಂತಹ ಚಿತ್ರಗಳಿಗಷ್ಟೇ ಸೀಮಿತನಾಗಿರುತ್ತಿದ್ದ. ಇದು ಪಾಟೀಲರಿಗೂ ಹೊರತಾಗಿರಲಿಲ್ಲ. ಅವರು ತಮ್ಮ ಕಲಾ ಶಾಲೆಯ ಕಲಿತ ಅಕಾಡೆಮಿಕ್ ಶೈಲಿ ಮುಂದೆ ಭಾವಚಿತ್ರಗಳನ್ನು ಚಿತ್ರಿಸುವಲ್ಲಿ ಸಹಕಾರಿಯಾಯಿತು. ಭಾವಚಿತ್ರ ರಚನೆ ಮತ್ತು ಮೂರ್ತಿಗಳ ರಚನೆ ಇವರ ಬದುಕಿಗೆ ಭದ್ರತೆಯನ್ನು ಒದಗಿಸಿದವೆಂದು ಹೇಳಬಹುದು. ಮಾಡಲ್‌ಗಳನ್ನು ರೂಪಿಸುವಲ್ಲಿ ಪಾಟೀಲರು ಎಲ್ಲರನ್ನೂ

ಮೀರಿಸುತ್ತಿದ್ದರು. ಇವರು ತಯ್ಯಾರಿಸಿದ ಮೂರ್ತಿಗಳನ್ನು ಹೆಚ್ಚಾಗಿ ಕನ್ನಡಕದ ಮಳಿಗೆಗಳಲ್ಲಿ ಬಳಸುತ್ತಿದ್ದರು. ಮುಂಬೈ ಜೀವನ ಯಾಂತ್ರಿಕ ಬುದುಕು ಎನ್ನುವುದನ್ನು ಅರಿತ, ಪಾಟೀಲರು, ಮುಂಬೈಯನ್ನು ತೊರೆದು ಹೈದ್ರಾಬಾದಿಗೆ ಬಂದರು. ಸ್ವಾತಂತ್ರ್ಯ ಪೂರ್ವದಲ್ಲಿ ಈಗಿನ ಹೈದ್ರಾಬಾದ ಕರ್ನಾಟಕ ನಿಜಾಮರ ಆಳ್ವಿಕೆಯಲ್ಲಿತ್ತು. ಇವರ ಆಳ್ವಿಕೆಯ ಬಗ್ಗೆ, ಅಥವಾ ಆಡಳಿತ ಶೈಲಿಯ ಬಗ್ಗೆ ಅನೇಕ ವಿಚಾರಗಳಿರಬಹುದು. ಆದರೆ ಅವರ ಕಲಾಭಿಮಾನದ ವಿಚಾರದಲ್ಲಿ ಎರಡು ಮಾತಿಲ್ಲ. ಸಾಲಾರಜಂಗ ಮ್ಯೂಜಿಯಂನಲ್ಲಿರುವ ಹೈದ್ರಾಬಾದ ಕರ್ನಾಟಕ ಕಲಾವಿದರ ಕಲಾಕೃತಿಗಳು ನಿಜಾಮರ ಆಶ್ರಯದಲ್ಲಿ ಇಲ್ಲಿರುವ ಕಲಾವಿದರೂ ಸಕ್ರಿಯವಾಗಿ ಪಾಲ್ಗೊಂಡಿದ್ದರೆಂಬುದಕ್ಕೆ ಸಾಕ್ಷಿಯಾಗಿವೆ.

ನಿಜಾಮರ ಒಡೆತನದಲ್ಲಿದ್ದ ರಾಜಾ ದಿನ್‌ಕರ್ ಎಂಬುವವರ ಸ್ಟುಡಿಯೋದಲ್ಲಿದ್ದುಕೊಂಡು ಕಲೆಯ ರಚನೆಯಲ್ಲಿ ತೊಡಗಿದ ಪಾಟೀಲರಿಗೆ ಅವರ ಆಸ್ಥಾನದಲ್ಲಿ ವಿಶೇಷ ಸ್ಥಾನ ದೊರೆತಿತ್ತು. ನಿಜಾಮರು ಪಾಟೀಲರ ಕೃತಿಗಳಿಗೆ ಎಷ್ಟು ಮಾರು ಹೋಗಿದ್ದರು ಎಂಬುದಕ್ಕೆ ಒಂದು ಉದಾಹರಣೆಯನ್ನು ಇಲ್ಲಿ ಉಲ್ಲೇಖಿಸಬಹುದು. ನಿಜಾಮರು ಕಲಾಪ್ರಿಯರಾದುದರಿಂದ ತಮ್ಮ ಆಳ್ವಿಕೆಗೊಳಪಟ್ಟ ಪ್ರದೇಶಗಳಲ್ಲಿ ಪರ್ಯಟನೆ ಕೈಗೊಂಡಾಗ, ಆ ಪ್ರದೇಶದಲ್ಲಿ ಯಾವುದೇ ಕಲಾತ್ಮಕ ವಸ್ತುಗಳು ಕಂಡುಬಂದರೆ ಅವನ್ನು ತಮ್ಮಲ್ಲಿಯ ಸಂಗ್ರಾಹಾಲಯದಲ್ಲಿ ತಂದಿಡುತ್ತಿದ್ದರು. ಪಾಟೀಲರು ಚಿತ್ರಿಸಿದ ಒಂದು ಭಾವಚಿತ್ರ ಕೂಡಾ ಇಲ್ಲಿ ಪ್ರದರ್ಶಿಸಲಾಗಿತ್ತು. ಈ ಚಿತ್ರ ನಿಜಾಮರ ಸೊಸೆ,

ರಾಣಿ ನಿಲೋಫರ್‌ದಾಗಿತ್ತು. ಈಕೆ ಲಾಹೋರಿನ ಶ್ರೇಷ್ಠ ನಟಿಯಾಗಿದ್ದಳಂತೆ. ತೈಲ ವರ್ಣದಲ್ಲಿ ರಚಿಸಿದ. ಈ ಚಿತ್ರವನ್ನು ನೋಡಲು ಮೊದಲು ಜನ ತಂಡೋಪತಂಡವಾಗಿ ಬರುತ್ತಿದ್ದರಂತೆ. ಒಬ್ಬ ಕಲಾವಿದನ ಕೃತಿ ಅಷ್ಟು ಜನರ ಮನ್ನಣೆಗಳಿಸಿತೆಂದರೆ ಅಥವಾ ಜನಾಕರ್ಷಣೆ ಹೊಂದಿತೆಂದರೆ, ಅದು ಕಲೆ ಹಾಗೂ ಕಲಾವಿದನಿಗೆ ದೊರೆತ ಪಾರಿತೋಷಕವೆನ್ನಬಹುದು. ರಾಣಿ ನಿಲೋಫರಳ ಚಿತ್ರವನ್ನು ಅರಮನೆಯ ಬಾಗಿಲಲ್ಲಿ ಇಟ್ಟಾಗ, ರಾಣಿಯೇ ಬಾಗಿಲಲ್ಲಿ ನಿಂತಿದ್ದಾಳೆ ಎಂಬ ಭ್ರಮೆ ನೋಡುಗರಲ್ಲಿ ಉಂಟಾಗುತ್ತಿತ್ತಂತೆ. ಆಗ ರಾಣಿ ಅಥವಾ ರಾಣಿಯ ಚೆಲುವಿನ ಬಗ್ಗೆ ಜನರಿಗೆ ಆಕರ್ಷಣೆ ಇರಲಿಲ್ಲ. ಯಾಕೆಂದರೆ ರಾಣಿಯರನ್ನು ಭಯ-ಭಕ್ತಿಯಿಂದ ಕಾಣುವ ಕಾಲವದು. ಆಕರ್ಷಣೆ ಏನಿದ್ದರೂ ಅಲ್ಲಿರುವ ಕಲಾಕೃತಿಯಲ್ಲಿ, ಕಲಾಕೃತಿಯಲ್ಲಿರುವ ಜೀವಂತಿಕೆಯಲ್ಲಿ, ಕೇವಲ ಪುರಾಣ ಹಾಗೂ ದೇವ ದೇವತೆಗಳಿಗೆ ಸಂಬಂಧಪಟ್ಟ ವಿಷಯಗಳಷ್ಟೇ ಚಿತ್ರಿಸುತ್ತಿರುವ ಆ ಸಂದರ್ಭದಲ್ಲಿ, ಸಮಕಾಲೀನರ ಚಿತ್ರಗಳನ್ನು ಬಿಡಿಸಿದ್ದುದು ಜನರಿಗೊಂದು ಹೊಸ ಅನುಭವವಾಗಿತ್ತು.

ಪಾಟೀಲರು ನಿಜಾಮ ಅರಸರ ಆಶ್ರಯದಲ್ಲಿರುವಾಗ, ನಿಜಾಮ ಉಸ್ಮಾನ್ ಆಲಿಖಾನರ್ ಇಡೀ ಕುಟುಂಬದವರ ಭಾವಚಿತ್ರಗಳನ್ನು ಚಿತ್ರಿಸಿದ್ದರಲ್ಲದೇ ಅನೇಕ ಶ್ರೀಮಂತರ ಭಾವಚಿತ್ರಗಳನ್ನು ಹಾಗೂ ನಿಸರ್ಗ ಚಿತ್ರಗಳನ್ನು ಚಿತ್ರಿಸಿದ್ದಾರೆ. ಇವರ ಜೀವನದಲ್ಲಿ ಈ ಸಮಯ ಅತಿ ಮಹತ್ವದ್ದೆಂದು ಪರಿಗಣಿಸಬಹುದು.

ಪಾಟೀಲರಿಗೆ ಇದೇ ಸಂದರ್ಭದಲ್ಲಿ ಬೇರೆ ಬೇರೆ ಕಡೆಯಿಂದ ಅನೇಕ ರಾಜರ ಹಾಗೂ ಶ್ರೀಮಂತರ ಆಹ್ವಾನ ಸಿಗುತ್ತಲೇ ಇತ್ತು. ಅಕ್ಕಲಕೋಟೆಯ ಮಹಾರಾಜರ ಆಹ್ವಾನ ಸ್ವೀಕರಿಸಿ ಅಲ್ಲಿಯ ರಾಜ ರಾಣಿಯರ ಹಾಗೂ ಅನೇಕ ಶ್ರೀಮಂತರ ಭಾವಚಿತ್ರಗಳನ್ನು ಚಿತ್ರಿಸಿದರು. ಮಹಾರಾಷ್ಟ್ರದ ಸೋಲಾಪೂರದಲ್ಲಿಯೂ ಪಾಟೀಲರು ಕೆಲವು ಕಾಲ ಕಳೆದದ್ದುಂಟು. ಅಲ್ಲಿಯೂ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಸಿದ್ಧರಾಮೇಶ್ವರರ ಕುರಿತು ಚಿತ್ರಿಸಿದ ಅನೇಕ ಚಿತ್ರಗಳು ಅಲ್ಲಿಯ ಜನರನ್ನು ಅಪಾರವಾಗಿ ಆಕರ್ಷಿಸಿದ್ದವು ಸಿದ್ಧರಾಮೇಶ್ವರ ಅಲ್ಲಿಯ ಜನರ ಆರಾಧ್ಯ ದೈವ. ಪಾಟೀಲರು ಚಿತ್ರಿಸಿದ ಚಿತ್ರಗಳು ಆ ಸಂದರ್ಭದಲ್ಲಿ ಭಕ್ತರಿಗೆ ತಮ್ಮ ಆರಾಧ್ಯ ದೈವವನ್ನು ಸಾಕ್ಷಾತ್‌ಗೊಳಿಸುತ್ತಿದ್ದವು. ಮಲ್ಲಿಕಾರ್ಜುನ ದೊರೆಯದೆ ಹೋದಾಗ ಸಿದ್ಧರಾಮೇಶ ಕೊಳ್ಳದಲ್ಲಿ ಜಿಗಿಯಬೇಕೆನ್ನುವಷ್ಟರಲ್ಲಿ ಭಗವಾನ್ ಮಲ್ಲಿಕಾರ್ಜುನ ಪ್ರತ್ಯಕ್ಷನಾಗಿ ಸಿದ್ಧರಾಮೇಶ್ವರನನ್ನು ಅಪ್ಪಿಕೊಳ್ಳುವ ಘಟನೆಯ ಚಿತ್ರ ಜನರನ್ನು ವಿಶೇಷವಾಗಿ ಆಕರ್ಷಿಸಿತ್ತು.

ಪಾಟೀಲರು ತಮ್ಮ ಜೀವನದ ಹೆಚ್ಚು ಕಾಲವನ್ನು ಅಲೆಯುವುದರಲ್ಲಿ ಕಳೆದಿದ್ದರೆಂದು ಕಂಡುಬರುತ್ತದೆ. ಹುಟ್ಟಿದ್ದು ನಿಂಬಾಳದಲ್ಲಾದರೂ, ಪನವೇಲ್, ಮುಂಬೈ, ಹೈದ್ರಾಬಾದ್, ಅಕ್ಕಲಕೋಟ್, ದುಬಲಗುಂಡಿ, ಸೋಲಾಪೂರ ಹೀಗೆ ಹಲವಾರು ಸ್ಥಳಗಳಲ್ಲಿ ನೆಲೆನಿಂತು ಕಲಾಕೃತಿಗಳ ರಚನೆ ಕೈಕೊಂಡಿದ್ದಾರೆ.

ಪಾಟೀಲರು ವೈಯಕ್ತಿಕ ಜೀವನಕ್ಕೆ ಹೆಚ್ಚು ಗಮನ ಕೊಟ್ಟಿರಲಿಲ್ಲ ಎಂದು ಹೇಳಬಹುದು. ಇವರು ಶ್ರೀಮಂತ ಕುಟುಂಬದಿಂದ ಬಂದಿದ್ದರೂ ಕಲೆಯ ಆಕರ್ಷಣೆಗೊಳಗಾಗಿ, ಕಲೆಯನ್ನೇ ನಂಬಿ ಅದರಲ್ಲಿಯೇ ನೆಮ್ಮದಿಯನ್ನು ಕಂಡು ಕೊಂಡದ್ದುಂಟು. ಪಾಟೀಲರ ವೈವಾಹಿಕ ಜೀವನದ ಮೇಲೆ ಹೆಚ್ಚು ಬೆಳಕು ಚೆಲಲ್ಲಲು ಸಾಧ್ಯವಾಗದಿದ್ದರೂ, ಸಾಧ್ಯವಾದಷ್ಟನ್ನೇ ನಾವು ಅರಿಯಬಹುದು. ಹತ್ತು ವರ್ಷದವರಾಗಿದ್ದಾಗಲೇ ಶರಣಬಸಮ್ಮನವರೊಂದಿಗೆ ಪಾಟೀಲರ ವಿವಾಹವಾಯಿತು. ಚಿಕ್ಕ ವಯಸ್ಸಿನಲ್ಲಿಯೇ ನಾಲ್ಕು ಹೆಣ್ಣು ಮಕ್ಕಳನ್ನು ಪಡೆದ ಪಾಟೀಲರಿಗೆ ಗಂಡು ಮಕ್ಕಳಾಗಲಿಲ್ಲ. ಹೆಣ್ಣು ಮಕ್ಕಳನ್ನು ಪ್ರೀತಿಯಿಂದ ಸಾಕಿ ಅವರನ್ನು ಮದುವೆ ಮಾಡಿಕೊಟ್ಟರು.

ನಾಲ್ಕು ಹೆಣ್ಣು ಮಕ್ಕಳಾಗಿದ್ದರೂ ಗಂಡು ಮಗು ಬೇಕೆನ್ನುವ ಬಯಕೆಯಿಂದ ಶ್ರೀಮತಿ ಅಂಬಾಬಾಯಿಯನ್ನು ಪಾಟೀಲರು ತಮ್ಮ ಎರಡನೆಯ ಪತ್ನಿಯಾಗಿ ಸ್ವೀಕರಿಸಿದರು. ಆದರೆ ಅವಳಿಗೂ ಮಕ್ಕಳಾಗಲಿಲ್ಲ. ಆದ್ದರಿಂದ ತಮ್ಮ ಪತ್ನಿಯ ಸಂಬಂಧಿಕರ ಮಗನನ್ನು ದತ್ತು ಪಡೆದರು. ಬಸವರಾಜ ಪಾಟೀಲರೆಂದು ನಾಮಕರಣಗೊಂಡ ಪಾಟೀಲರ ದತ್ತು ಪುತ್ರ ಇಂದು ತಮ್ಮ ಧರ್ಮ ಪತ್ನಿಯಾದ ಗಂಗಾಬಾಯಿಯ ಜೊತೆಗೂಡಿ ಪಾಟೀಲರ ಅಮೂಲ್ಯ ವಸ್ತುಗಳನ್ನು ಹಾಗೂ ಅಳಿದುಳಿದ ಕಲಾ ಕೃತಿಗಳನ್ನು ಕಾಯ್ದಿಟ್ಟಿದ್ದಾರೆ.

ಕಲೆ ಸಾರ್ವಜನಿಕವಾಗಿಲ್ಲದ ಅಂದಿನ ದಿನಗಳಲ್ಲಿ ಕಲಾವಿದ ಕೇವಲ ಪಟ್ಟಣಗಳಲ್ಲಷ್ಟೇ ತನ್ನತನವನ್ನು ಕಂಡು

ಕೊಳ್ಳಬೇಕಾಗುತ್ತಿತ್ತು. ಅಲ್ಲಿ ಅವರಿಗೆ ಹಣಕಾಸಿನ ವ್ಯವಸ್ಥೆಯು ಆಗುತ್ತಿತ್ತಲ್ಲದೇ ಕಲೆಯಲ್ಲಿ ಕ್ರೀಯಾಶೀಲರಾಗಿರುವುದಕ್ಕೆ. ಅನುಕೂಲವಾಗುತ್ತಿತ್ತು. ಆದುರಿಂದಲೇ ಪಾಟೀಲರು ಪಟ್ಟಣಗಳಲ್ಲಿಯೇ ಹೆಚ್ಚು ತಮ್ಮ ಜೀವಿತಾವಧಿಯನ್ನು ಕಳೆದದ್ದು.

ಈ ಮಧ್ಯೆ ಪಾಟೀಲರ ಸಹೋದರನ ಹಾಗೂ ಆತನ ಪತ್ನಿಯ ಅಕಾಲ ವ್ಯತ್ಯುವಿನ ಕಾರಣ ಇವರು ನಿಂಬಾಳಕ್ಕೆ ಹೋಗಬೇಕಾದ ಅನಿವಾರ್ಯತೆ ಸೃಷ್ಟಿಯಾಯಿತು. ಅಲ್ಲಿ ವ್ಯವಸಾಯದ ಜೊತೆ ಕಲಾ ನಂಟನ್ನು ಜೋಡಿಸಿಕೊಂಡು ಹೋಗುವ ಜವಾಬ್ದಾರಿಯನ್ನು ವಹಿಸಿದರು. ಇದೊಂದು ಹೊಸ ಅನುಭವವಾದರೂ, ಪಾಟೀಲರು ಅದನ್ನು ಸಮರ್ಥವಾಗಿಯೇ ನಿಭಾಯಿಸಿದರು. ಈ ಸಮಯದಲ್ಲಿಯೇ ಪಾಟೀಲರು ನಿಂಬಾಳದಲ್ಲಿ ಸುವ್ಯವಸ್ಥಿತವಾದ ಸ್ಟುಡಿಯೋ ಹಾಗೂ ನಂತರ ಆರ್ಟ್ ಗ್ಯಾಲರಿಯನ್ನು ನಿರ್ಮಿಸಿದರು. ಪಾಟೀಲರು ನಿರ್ಮಿಸಿದ್ದ ಆ ಕಲಾ ಗ್ಯಾಲರಿ ಇಂದು ಶಿಥಿಲಾವಸ್ಥೆಯಲ್ಲಿದ್ದರೂ ನೋಡಲು ದೊರೆಯುತ್ತದೆ.

ಜೀವನದ ಅನೇಕ ಮಜಲುಗಳನ್ನು ಕಂಡ ಪಾಟೀಲರ ಜೀವನ ಅವಿಸ್ಮರಣೀಯ. ಇಂತಹ ಅರ್ಥಪೂರ್ಣ ಬಾಳನ್ನು ಜೀವಿಸಿದ ಪಾಟೀಲರು ೧೯೭೬ರಲ್ಲಿ ನಿಧನರಾದರು.

### ಕೃತಿಗಳು

ಶಾಂತಲಿಂಗಪ್ಪನವರ ಕೃತಿಗಳ ಅವಲೋಕನ ಕೈಗೊಳ್ಳುವುದಕ್ಕೂ ಮುಂಚೆ ನಾವು ಅವರು ಪರಿಣಿತರಿದ್ದ

ಮಾಧ್ಯಮಗಳತ್ತ ದೃಷ್ಟಿ ಹಾಯಿಸುವುದು ಉಚಿತ. ಇವರು ತೈಲ ವರ್ಣವನ್ನು ಮಾಧ್ಯಮವನ್ನಾಗಿ ಬಳಸಿ ಭಾವನೆಗಳನ್ನು ಅಭಿವ್ಯಕ್ತಿಗೊಳಿಸಿದ್ದು ಒಂದಾದರೆ, ಮೂರ್ತಿ ರಚನೆಯಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿದ್ದು ಎರಡನೆಯದು. ಇವರ ಪಾಂಡಿತ್ಯ ಇಷ್ಟಕ್ಕೆ ಸೀಮಿತವಾಗಿರಲಿಲ್ಲ. ಛಾಯಾಚಿತ್ರ ಕಲೆಯಲ್ಲಿಯೂ ಇವರದು ಪಳಗಿದ ಕೈ. ದೊಡ್ಡ ದೊಡ್ಡ ಅಳತೆಯ ಕಪ್ಪು ಬಿಳುಪು ಛಾಯಚಿತ್ರಗಳನ್ನು ಪೇಸ್ಟಲ್‌ಗಳಿಂದ ವರ್ಣಚಿತ್ರವನ್ನಾಗಿ ಮಾರ್ಪಡಿಸುವುದರಲ್ಲಿ ಪಾಟೀಲರು ಹೆಸರುವಾಸಿಯಾಗಿದ್ದರು. ಇದಕ್ಕೆಂದೆ ತಮ್ಮ ಊರಲ್ಲಿ ಸುವ್ಯವಸ್ಥಿತವಾದ ಸ್ಟುಡಿಯೋವನ್ನು ನಿರ್ಮಿಸಿದ್ದರು.

ಕಪ್ಪು ಬಿಳುಪು ಛಾಯಾಚಿತ್ರಗಳಿಗೆ ಬಣ್ಣ ಕೊಟ್ಟು ಚಿತ್ರಗಳಿಗೆ ಜೀವ ತುಂಬಿದಾಗ ವರ್ಣ ಛಾಯಾಚಿತ್ರಗಳ ಕಲ್ಪನೆ ಇರದ ಅಂದಿನ ದಿನಗಳಲ್ಲಿ ಪಾಟೀಲರ ಕಾರ್ಯಕ್ಕೆ ಬೆರಗಾಗದವರಿಲ್ಲ. ಇಂತಹ ಚಿತ್ರಗಳೂ ಹಾಗೂ ನೆಗೆಟೀವ್‌ಗಳು ಇಂದಿಗೂ ನಿಂಬಾಳ ಗ್ರಾಮದ ಮನೆಯಲ್ಲಿ ನಾವು ನೋಡಬಹುದಾಗಿದೆ.

ದಿವಂಗತ ಶಾಂತಲಿಂಗಪ್ಪನವರು ತಮ್ಮ ಜೀವನದಲ್ಲಿ ಅನೇಕ ಚಿತ್ರಗಳನ್ನು ರಚಿಸಿದ್ದಾರೆ. ಮುಖ್ಯವಾಗಿ ವ್ಯಕ್ತಿ ಚಿತ್ರಗಳು ಇವರ ಕುಶಲ ಕಲೆಯ ಗುರುತಾಗಿ ಉಳಿದಿವೆ. ನಿಜಾಮ, ನೆಹರೂ, ಗಾಂಧಿ, ಸುಭಾಷ್‌ಚಂದ್ರಬೋಸ್, ತಿಲಕ್, ಪೂಜಾರಿ, ಸಿಂಧಿ ವ್ಯಕ್ತಿ ನಿಲೋಫರ್, ಶಂಕರಪ್ಪ, ಫತ್ತೇಪಾರ್, ಮಾಣಿಕ ನಗರದ ಪ್ರಭುಗಳು, ಹಾನಗಲ್ಲ ಕುಮಾರಸ್ವಾಮಿಗಳು ಮತ್ತು ಇನ್ನೂ ಅನೇಕ ಚಿತ್ರಗಳಲ್ಲಿ ಇವರ ಪ್ರಾವೀಣ್ಯತೆಯನ್ನು ಕಾಣಬಹುದಾಗಿದೆ.

ಪಾಟೀಲರು ತಮ್ಮದೇ ಆದ ಶೈಲಿಯನ್ನು ರೂಢಿಸಿಕೊಳ್ಳಲು ಪ್ರಯತ್ನ ಪಟ್ಟವರಲ್ಲ ವಾಸ್ತವಕ್ಕೆ ಹೆಚ್ಚು ಮಹತ್ವ ನೀಡಿದ್ದು ನಾವು ಕಾಣಬಹುದಲ್ಲದೆ, ಕೃತಿಗಳ ವಿಷಯಗಳು ಸಹ ಸಾಮಾನ್ಯವಾಗಿವೆ. ಮಾಡಲ್‌ಗಳನ್ನು ಮುಂದಿಟ್ಟುಕೊಂಡು ಚಿತ್ರಿಸಿದ ಫಲವೋ ಏನೋ ಚಿತ್ರದಲ್ಲಿರುವ ವ್ಯಕ್ತಿಯ ಸ್ವಭಾವವನ್ನು ನಾವು ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತದೆ. ವ್ಯಕ್ತಿಯಲ್ಲಿರುವ ಕೋಮಲತೆ, ಕಠೋರತೆ ಹಾಗೂ ಗಂಭೀರತೆಗಳನ್ನು ನಾವು ಈ ಚಿತ್ರಗಳಲ್ಲಿ ಕಾಣಬಹುದು. ಹಾಳೆಯ ಮೇಲೆ ಜಲವರ್ಣಗಳಿಂದ ರಚಿಸಿದ ಕೃತಿಗಳು ತೈಲ ವರ್ಣಗಳಲ್ಲಿ ರಚಿಸಿದ ಚಿತ್ರಗಳಿಗಿಂತ ಹೆಚ್ಚಾಗಿ ಕಾಣಬಹುದು.

ಪ್ಲಾಸ್ಟರ್‌ನಲ್ಲಿ ಮೂರ್ತಿಗಳನ್ನು ಮಾಡುವುದು ಪಾಟೀಲರಿಗೆ ತುಂಬ ಇಷ್ಟವಾದ ವಿಷಯ. ಕಲಾವಿದ ಫಡಕೆಯವರು ಇವರ ಮೇಲೆ ಗಾಢವಾದ ಪರಿಣಾಮ ಬೀರಿದ್ದರು. ಪಾಟೀಲರು ಹೆಚ್ಚಾಗಿ ಮನುಷ್ಯರ ಪ್ರತಿಕೃತಿಗಳನ್ನು ತಯ್ಯಾರಿಸಿದ್ದಾರೆ. ಚಿತ್ರ ಕಲೆಯಂತೆಯೇ ಇಲ್ಲಿಯೂ ಕೂಡಾ ನೈಜತೆಗೆ ಒತ್ತು ಕೊಟ್ಟಿದ್ದಾರೆ. ಪ್ಲಾಸ್ಟರ್‌ನಲ್ಲಿ ಮಾಡಿದ ಈ ಮೂರ್ತಿಗಳು ಮನುಷ್ಯರ ತಲೆಯಗಾತ್ರ ಹೊಂದಿದ್ದು ಅವಕ್ಕೆ ಮಾನವನ ಮೈಬಣ್ಣದ ನೈಜ ವರ್ಣವನ್ನು ಲೇಪಿಸಲಾಗಿದೆ. ಇವರ ಕೆಲವು ಇಂತಹ ಕೃತಿಗಳು ನಿಜವಾದ ಮನುಷ್ಯನ ಶಿರವನ್ನು ನೋಡಿದಂತೆ ಭ್ರಮೆ ಹುಟ್ಟಿಸುತ್ತವೆ. ಈ ಕೃತಿಗಳಲ್ಲಿ ಕಣ್ಣುಗಳ ರಚನೆ ಮಹತ್ವ ಪಡೆಯುತ್ತದೆ. ಗಾಜಿನಂತೆ ಗೋಚರಿಸುವ ಕಣ್ಣುಗಳು, ಬಿಳಿ ಗುಡ್ಡೆಯಲ್ಲಿರುವ ಸಣ್ಣ ರಕ್ತನಾಳಗಳು ಹಾಗೂ ಕಂದು ಬಣ್ಣದ ಪಾಪ ಇವೆಲ್ಲವನ್ನು ಅವರ ಮೂರ್ತಿ ಶಿಲ್ಪದಲ್ಲಿ ಸ್ಪಷ್ಟವಾಗಿ

ಕಾಣಬಹುದು. ಪಾಟೀಲರು ಕಣ್ಣಲ್ಲಿ ಜೀವ ತುಂಬುವ ಶೈಲಿಯನ್ನು ನೋಡಿ ಇವರ ಗುರುಗಳಾದ ಫಡಕೆಯವರು ಇವರನ್ನು ಕುರಿತು ಹೀಗೆ ಹೇಳುತ್ತಿದ್ದರಂತೆ "ಶಾಂತಲಿಂಗಪ್ಪಾ ನೀನು ಅದ್ಹೇಗೆ ಕೃತಿಯ ಕಣ್ಣಲ್ಲಿ ಜೀವ ತುಂಬುತ್ತಿಯಾ". ಇದು ಅತೀಶಯೋಕ್ತಿ ಎನಿಸಬಹುದು. ಆದರೆ ಅವರ ನಿಜವಾದ ಕೃತಿಯನ್ನು ನೋಡಿದಾಗ ಈ ಮಾತು ನಿಜವೆನಿಸಲಾರದು.

**ಭಾವಚಿತ್ರ**

ಪಾಟೀಲರು ರಚಿಸಿದ ಒಂದು ಭಾವಚಿತ್ರ ನೈಜಕತೆಯ ಪರಮಾವಧಿ ಎಂದು ಹೇಳಬಹುದು. ಕಪ್ಪು ಡ್ರಾಯ್ ಪೇಸ್ಟಲ್‌ನಿಂದ ರಚಿಸಿದ ಈ ಕಲಾ ಕೃತಿ ಮಧ್ಯ ವಯಸ್ಸಿನ ವ್ಯಕ್ತಿಯದ್ದಾಗಿದೆ. ತಲೆಯ ಮೇಲೆ ಪೇಟಾ (ರುಮಾಲು) ಸುತ್ತಿದ್ದಾರೆ. ಕಿವಿಗಳು ಆ ಪೇಟದಲ್ಲಿ ಮರೆಯಾಗಿವೆ. ವ್ಯಕ್ತಿಯ ಗಡ್ಡದ ಕೂದಲು ಎರಡು ಕಡೆ ಹರಡಿದ್ದು ಇವುಗಳನ್ನು ಬಿಡಿಸಿದ ರೀತಿ ವಿಶಿಷ್ಠವಾಗಿದೆ. ಕಣ್ಣು, ಮೂಗು ಹಾಗೂ ಮುಖದ ಉಳಿದ ಭಾಗಗಳನ್ನು ಅತಿ ಸೂಕ್ಷ್ಮದಿಂದ ಚಿತ್ರಿಸಿದ್ದಾರೆ. ಕಣ್ಣುಗಳಲ್ಲಿಯಂತೂ ಜೀವಂತಿಕೆ ತುಂಬಿರುವಂತೆ ಭಾಸವಾಗುತ್ತಿರುವ ಇದು ವ್ಯಕ್ತಿಯ ಮೇಲೆ ಉಡುಪು ಹಚ್ಚಿ ಚಿತ್ರಿಸಿದಂತೆ ಕಾಣುವುದಿಲ್ಲ. ಇಲ್ಲಿ ಕೇವಲ ಪೋಸ್ಟರ ವರ್ಣವನ್ನು ತಾಂತ್ರಿಕವಾಗಿ ತಿರುಗಿಸಿ ಗೆರೆ ಎಳೆದಿದ್ದಾರೆ. ಆದರೆ ಅಷ್ಟರಲ್ಲಿಯೇ ಬಟ್ಟೆಯ ನಿರಿಗೆಯನ್ನು ಯಥಾವತ್ತಾಗಿ ಚಿತ್ರಿಸುವಲ್ಲಿ ಯಶಸ್ವಿಯಾಗಿದ್ದಾರೆ.

## ವಸ್ತು ಚಿತ್ರಣ

ನಿಂಬಾಳ ಗ್ರಾಮದ ಮನೆಯಲ್ಲಿರುವ ಈ ಕಲಾ ಕೃತಿ ತೈಲ ವರ್ಣದ್ದಾಗಿದೆ. ಸುಮಾರು ೧೪"x೨೨" ಅಳತೆ ಹೊಂದಿರಬೇಕು. ಬಹುಶ: ಪಾಟೀಲರು ವಿದ್ಯಾರ್ಥಿ ದೆಶೆಯಲ್ಲಿರುವಾಗ ಈ ಕೃತಿಯನ್ನು ರಚಿಸಿರಬೇಕು. ಏಕೆಂದರೆ ಚಿತ್ರ ಕಲಾ ವ್ಯಾಸಂಗದಲ್ಲಿ ಮಾತ್ರ ಈ ರೀತಿಯ ವಸ್ತುಗಳನ್ನು ಜೋಡಿಸಿ ಚಿತ್ರಿಸುವ ಪದ್ಧತಿ ಇರುವುದನ್ನು ನಾವು ಗಮನಿಸಬಹುದು. ಒಂದು ಪೆಟ್ಟಿಗೆಯ ಮೇಲೆ ಉತ್ತರ ಕರ್ನಾಟಕದಲ್ಲಿ "ಸಮ್ಯಾ" ಎಂದು ಕರೆಯುವ ದೀಪಸ್ತಂಭ, ಬಹುಶಃ ಅದು ಹಿತ್ತಾಳೆಯದಿರಬಹುದು. ಅದರ ಎಡಗಡೆ ಸರಪಣಿ ಹೊಂದಿರುವ ತೂಗುದೀಪ, ದೀಪದ ಬಲಗಡೆ ತಾಮ್ರದ ಬಿಂದಿಗೆ, ಅದರ ಮುಂದೆ ಶಂಖವನ್ನು ಜೋಡಿಸಿದ್ದಾರೆ. ಇವೆಲ್ಲವುಗಳ ಕೆಳಗಡೆ ಹಿನ್ನೆಲೆಯಲ್ಲಿ ಬಿಳಿಯ ಬಟ್ಟೆಯನ್ನು ಹಾಸಿದ್ದು ಕಾಣಬಹುದು.

ಇಲ್ಲಿ ಧಾತುವಿನ ಗಟ್ಟಿತನ ಹಾಗೂ ಹೊಳಪು, ಪ್ರಮಾಣ, ಇವೆಲ್ಲವನ್ನು ಕಲಾವಿದರು, ತುಂಬಾ ತಾಳ್ಮೆಯಿಂದ ಚಿತ್ರಿಸಿ ವಸ್ತುಗಳನ್ನು ಹೊಳೆಯುವ ರೀತಿಯಲ್ಲಿ ತೋರಿಸಿದ ರೀತಿ ವಿಶಿಷ್ಟವಾದುದು.

## ಶಿಲ್ಪ ಕಲಾ ಕೃತಿ

ಪಾಟೀಲರು ತಮ್ಮ ಜೀವನದಲ್ಲಿ ಅನೇಕ ಮೂರ್ತಿಗಳನ್ನು ರಚಿಸಿದ್ದರೂ, ಆದರೆ ಅವು ಕಾಲದ ಹೊಡೆತಕ್ಕೆ ಸಿಕ್ಕಿ ನಾಶವಾಗಿವೆ

ಎಂದು ಹೇಳಲಾಗುತ್ತಿದೆ. ಪಾಟೀಲರ ಅಮೂಲ್ಯ ಶಿಲ್ಪಗಳೂ ಹಾಗೂ ಕಲಾಕೃತಿಗಳನ್ನು ಒಂದು ಕೋಣೆಯಲ್ಲಿ ಇಟ್ಟಾಗ ಕೋಣೆ ಕುಸಿದು ಕೃತಿಗಳೆಲ್ಲಾ ನಾಶವಾಗಿದ್ದು ಕೆಲವೇ ಮೂರ್ತಿಗಳು ಇಂದು ನಮಗೆ ನೋಡಲು ಸಿಗುತ್ತವೆ. ಅವುಗಳಲ್ಲಿ ಮನುಷ್ಯನ ತಲೆಯ ಗಾತ್ರವನ್ನು ಹೋಲುವ ಎರಡು ಭಾವ ಶಿಲ್ಪಗಳು ಪ್ರಮುಖವಾಗಿವೆ. ಪ್ಲಾಸ್ಟರ್‌ದಿಂದ ಮಾಡಿದ ಒಂದು ಶಿಲ್ಪ ವಯಸ್ಸಾದ ವ್ಯಕ್ತಿಯದಾಗಿದ್ದು, ತಲೆ ಪೂರ್ತಿ ಬೋಳಾಗಿದೆ. ಎರಡು ಕಣ್ಣುಗಳು ಮುಚ್ಚಿವೆ. ಉದ್ದನೆಯ ಮೂಗು ದಪ್ಪನೆಯ ಮೀಸೆ ಸುಕ್ಕುಗಟ್ಟಿದ ಮುಖ ಹಣೆಯ ಮೇಲಿನ ನಿರಿಗೆ, ಗುಳಿಬಿದ್ದ ಕಣ್ಣು ಇವೆಲ್ಲವನ್ನೂ ಒಬ್ಬ ನುರಿತ ಕಲಾವಿದನೇ ಸೃಷ್ಟಿಸಲು ಸಾಧ್ಯ. ಮೂರ್ತಿಯ ಮುಖದಲ್ಲಿರುವ ಭಾವನೆಯೇ ಕೃತಿಯ ಪ್ರಮುಖ ಆಕರ್ಷಣೆ ಎನ್ನಬಹುದು. ಮೂರ್ತಿಯ ಜೊತೆ ಇನ್ನೊಂದು ದುಂಡನೆಯ ಮುಖವನ್ನು ಹೊಂದಿರುವ ವ್ಯಕ್ತಿಯ ಭಾವ ಶಿಲ್ಪವಿದೆ. ಇದರ ಕಂಗಳಂತೂ ನಿಜವಾದ ಕಂಗಳೆಂಬ ಭಾವನೆ ನಮ್ಮಲ್ಲಿ ಬಾರದೇ ಇರದು. ಬಿಳಿಯ ಗುಡ್ಡೆಗಳ ಮಧ್ಯದಲ್ಲಿ ತೆಳು ನೀಲಿ ವರ್ಣದ ಪಾಪೆ ಹೊಂದಿರುವ ಇವು ಗಾಜಿನದ್ದಾಗಿರಬೇಕು. ಪ್ಲಾಸ್ಟರ್‌ನಲ್ಲಿ ಮೂರ್ತಿ ತಯ್ಯಾರಿಸಿ ಅದು ಹಸಿ ಇರುವಾಗಲೇ ಅದರಲ್ಲಿ ಗಾಜಿನ ಕಣ್ಣುಗಳನ್ನು ಕೂಡಿಸಿರಬೇಕು. ಒಟ್ಟಾರೆ ಇವು ಜೀವಂತ ಮಾನವನನ್ನೇ ಹೋಲುವಂತಹ ಕೃತಿಗಳಾಗಿವೆ.

ಭುಜಗಳ ಮೇಲೆ ಹರಡಿರುವ ಬಟ್ಟೆ, ಎದೆಯ ಮೇಲಿರುವ ರೋಮಗಳು, ಜನಿವಾರ, ಹಾಗೂ ಪೂಜಾರಿಯ ಕೊರಳನ್ನು ಅಲಂಕರಿಸಿದ ಮಣಿಗಳು, ಸರ ಇವೆಲ್ಲ ಪಾಟೀಲರ ಅಭಿವ್ಯಕ್ತಿಗೆ ಹಿಡಿದ ಕನ್ನಡಿಯೆನ್ನಬಹುದು. ಈ ಕೃತಿಯಲ್ಲಿ ಮುಖ್ಯವಾಗಿ



ಬೀದರ್ ಜಿಲ್ಲೆ ದುಬಲಗುಂಡಿಯ ಶಂಕರಪ್ಪಾ ಫತ್ತೇಪೂರ
Shankareppa Fattepur, Dubalgundi, Bidar Dist.

ವ್ಯಕ್ತಿಚಿತ್ರ
Portrait



ಬೀದರ್ ಜಿಲ್ಲೆ ದುಬಲಗುಂಡಿಯಲ್ಲಿರುವ "ಹಾನಗಲ್ಲ ಕುಮಾರ ಸ್ವಾಮಿ"ಯವರು — ತೈಲಚಿತ್ರ

Hanagal Kumar Swamiji, Dubalgundi, Bidar Dist. — Oil Colour



ಬೀದರ್ ಜಿಲ್ಲೆ ದುಬಲಗುಂಡಿ ಗ್ರಾಮದ ಶ್ರೀಮಂತ ಶ್ರೀ ಶರಣಪ್ಪಾ ಫತ್ತೇಪೂರ
Sharnappa Fattepur, Dubalgundi, Bidar Dist.

ವ್ಯಕ್ತಿಚಿತ್ರ
Portrait



ಪೂಜಾರಿಯ ಭಾವಚಿತ್ರ
Portrait of a Pujari

ಜಲವರ್ಣ
Water Colour



ಭಾವಶಿಲ್ಪ Sculpture



ಶಿಲ್ಪಕಲಾಕೃತಿ Sculpture



ಹೈದ್ರಾಬಾದಿನ ನಿಜಾಮರ ಭಾವಚಿತ್ರ ತೈಲವರ್ಣ

Portrait of the Nizaam of Hyderabad Oil Colour



ಶಾಂತಲಿಂಗಪ್ಪಾ ಪಾಟೀಲರು ಉಪಯೋಗಿಸುತ್ತಿದ್ದ ಸಲಕರಣೆಗಳು
Instruments used by Shanthalingappa Patil



"ಸ್ಥಿರ ವಸ್ತುಗಳ ಚಿತ್ರ"
Still Life

ತೈಲವರ್ಣ
Oil Colour



"ಸ್ಥಿರ ವಸ್ತುಗಳ ಚಿತ್ರ"
Still Life

ತೈಲವರ್ಣ
Oil Colour



ಭಾವಚಿತ್ರ
Portrait

ಚಾರ್‌ಕೋಲ್
Charcoal



ದುಬಲಿ ಗುಂಡಿಯಲ್ಲಿರುವ "ಮುಧೋಳ ಸ್ವಾಮಿಗಳ ಚಿತ್ರ"
Portrait of Mudhol Swamiji

ತೈಲವರ್ಣ
Oil Colour



"ಸಿಂಧಿ ವ್ಯಕ್ತಿ"
Sindhi Person

ತೈಲವರ್ಣ
Oil Colour

ನೆರಳು ಬೆಳಕಿನ ವಿಭಜನೆ ತುಂಬಾ ಸೊಗಸಾಗಿ ಮಾಡಿದ್ದು ಕಂಡುಬರುತ್ತದೆ. ಕೃತಿಯಲ್ಲಿ ಮುಖ್ಯವಾಗಿ ರೋಮುಗಳನ್ನು ಅತಿ ಸರಳವಾಗಿ ಚಿತ್ರಿಸಿದ್ದರೂ, ಅವು ಗಾಳಿಯಲ್ಲಿ ತೇಲುತ್ತಿರುವಂತೆ ಚಿತ್ರಿಸಿದ ಶೈಲಿಯೇ ಅದ್ಭುತವಾಗಿದೆ.

## ನಿಜಾಮರ ಭಾವಚಿತ್ರ

ಹೈದ್ರಾಬಾದಿನ ನಿಜಾಮರ, ತೈಲವರ್ಣದಿಂದ ರಚಿಸಿರುವ ಭಾವಚಿತ್ರವಿದು. ಸುಮಾರು ಒಂದುವರೆ ಅಡಿ ಅಗಲ ಹಾಗೂ ಎರಡು ಅಡಿ ಉದ್ದವಿರುವ ಕಲಾಕೃತಿಯಲ್ಲಿ ನಿಜಾಮರ ಮುಖಕ್ಕೆ ಹೆಚ್ಚು ಒತ್ತುಕೊಟ್ಟಿರುವುದು ಕಂಡುಬರುತ್ತದೆ. ಮುಖದ ಹಿನ್ನೆಲೆ ಹಾಗೂ ತೊಟ್ಟ ಉಡುಪು ಎರಡೂ ಕಂದು ಬಣ್ಣದ್ದಾಗಿದ್ದು, ಉಡುಪು ಹಿನ್ನೆಲೆಯಲ್ಲಿ ಮಸುಕಾಗಿದಂತೆ ಗೋಚರಿಸುತ್ತದೆ. ಕಲಾವಿದ ಬಹುಶಃ ರಾಜರ ಮುಖವನ್ನು ಕೃತಿಯ ಕೇಂದ್ರವನ್ನಾಗಿ ಇಟ್ಟುಕೊಂಡು ಚಿತ್ರಿಸಿದ್ದು ಸ್ಪಷ್ಟವಾಗುತ್ತದೆ. ಏಕೆಂದರೆ ನೋಡುಗನಿಗೆ ತಕ್ಷಣ ಗೋಚರಿಸುವುದು ವ್ಯಕ್ತಿಯ ಮುಖ, ಹಾಗೂ ಆತ ತೊಟ್ಟ ಕಿರೀಟ. ಕಂದು ಬಣ್ಣದ ಹಿನ್ನೆಲೆಯಲ್ಲಿ ಬಂಗಾರ ವರ್ಣದ ಕಿರೀಟ ನೋಡುಗನನ್ನು ತನ್ನತ್ತ ಸೆಳೆಯುವುದರಲ್ಲಿ ಸಂಶಯವಿಲ್ಲ. ತುಂಬಿದ ಕೆನ್ನೆ, ಮಂದಹಾಸ ಸೂಚಿಸುವ ತುಟಿಗಳು ಇವನ್ನು ಕಲಾವಿದರು ಬಹು ಸೂಕ್ಷ್ಮವಾಗಿ ಚಿತ್ರಿಸಿದ್ದು ಕಾಣಬಹುದು. ಇಂದಿಗೂ ಈ ಕಲಾಕೃತಿಯನ್ನು ಕಲಾವಿದರ ಮನೆಯಲ್ಲಿ ನೋಡಬಹುದು.

## ದುಬಲ್‌ಗುಂಡಿಯಲ್ಲಿರುವ ಕಲಾಕೃತಿಗಳು

ದುಬಲ್‌ಗುಂಡಿ, ಬೀದರ್, ಜಿಲ್ಲೆಯಲ್ಲಿರುವ ಒಂದು ಗ್ರಾಮ. ಇದು ಪಾಟೀಲರ ಕಲಾ ಜೀವನದ ಜೊತೆ ತಳಕು

ಹಾಕಿಕೊಂಡಿದೆ. ನಿಜಾಮರ ಆಡಳಿತವಿದ್ದ ಈ ಊರಲ್ಲಿ, ಶರಣಪ್ಪಾ ಫತ್ತೆಪೂರ್ ಎಂಬ ವ್ಯಕ್ತಿಯು ನಿಜಾಮರ ಸಹಾಯಕನಾಗಿ ಅಲ್ಲಿಯ ಆಡಳಿತವನ್ನು ನೋಡಿಕೊಳ್ಳುತ್ತಲಿದ್ದ. ಸುತ್ತಲ ಹಳ್ಳಿಗಳಿಗೆ ಈತ ಒಡೆಯ. ನಿಜಾಮರು ಆಗಾಗ ಈ ಪ್ರದೇಶದ ಕಡೆ ಭೇಟಿ ನೀಡಿದಾಗ ದುಬಲ್‌ಗುಂಡಿಯಲ್ಲಿ ತಂಗುತ್ತಿದ್ದರಂತೆ. ಅರಮನೆಯಂತಿರುವ ಶರಣಪ್ಪಾ ಫತ್ತೆಪೂರ ಮನೆ ಹಾಗೂ ಮನೆಯೊಳಗಿರುವ ಕಲಾತ್ಮಕ ವಸ್ತುಗಳು ಇಂದಿಗೂ ಅಚ್ಚಳಿಯದೆ ಹಾಗೆಯೇ ನಿಂತಿವೆ. ಈ ಕಲಾತ್ಮಕ ವಸ್ತುಗಳಲ್ಲಿ ಶ್ರೀ ಶಾಂತಲಿಂಗಪ್ಪನವರ ಕೃತಿಗಳೂ ಸೇರಿವೆ.

ಶರಣಪ್ಪಾ ಫತ್ತೇಪೂರ ಕೂಡಾ ಕಲಾ ಪ್ರೇಮಿ. ಈತ ತನ್ನ ದೂರದ ಸಂಬಂಧಿಯಾದ ಪಾಟೀಲರಿಗೆ ಸುಮಾರು ಹತ್ತು ವರ್ಷಗಳ ಕಾಲ ಆಶ್ರಯ ನೀಡಿದ್ದರಂತೆ. ಪಾಟೀಲರು ಇಲ್ಲಿದ್ದಾಗ ಶರಣಪ್ಪನವರ ಕುಟುಂಬದ ಚಿತ್ರಗಳನ್ನು, ಧರ್ಮಗುರುಗಳ ಚಿತ್ರಗಳನ್ನು ಹಾಗೂ ದುಬಲಗುಂಡಿಯ ಸುತ್ತೂರಿನ ಶ್ರೀಮಂತರ ಚಿತ್ರಗಳನ್ನು, ಚಿತ್ರಿಸಿದ್ದು ಕಂಡು ಬರುತ್ತದೆ. ಖೇಣಿ ರಂಜೋಳ, ಹುಮನಾಬಾದ್, ಕನಕಟ್ಟಿ, ಕಣಜಿಗಳಲ್ಲಿ ಅಲ್ಲದೇ ಇನ್ನೂ ಅನೇಕ ಗ್ರಾಮಗಳಲ್ಲಿ ಕಲಾವಿದರು ಚಿತ್ರಿಸಿರುವ ಕೃತಿಗಳನ್ನು ನಾವು ಕಾಣಬಹುದು.

### ಶರಣಪ್ಪಾ ಫತ್ತೇಪೂರ ಇವರ ವ್ಯಕ್ತಿ ಚಿತ್ರ

ವ್ಯಕ್ತಿಯನ್ನು ತಮ್ಮೆದುರು ಕುಳ್ಳಿರಿಸಿ ರಚಿಸಿದ ಕೃತಿಯಿದು. ಇಲ್ಲಿ ಬಾಹ್ಯ ಸೌಂದರ್ಯಕ್ಕೆ ಹೆಚ್ಚು ಮಹತ್ವ ನೀಡಿದ್ದು ಕಾಣಬಹುದು. ಕಟ್ಟಿಗೆಯ ಆಸನದ ಮೇಲೆ ಕುಳಿತ ವ್ಯಕ್ತಿ ಬಿಳಿಯ

ಪಂಚೆ ಹಾಗೂ ಅಂಗಿಯನ್ನು ತೊಟ್ಟಿದ್ದಾರೆ, ಅದರ ಮೇಲೆ ಕೋಟು, ತಲೆಯ ಮೇಲೆ ಪೇಟದ ಹಾಗೆ ಕಾಣುವ ಕೆಂಪು ವರ್ಣದ ರುಮಾಲು ಸುತ್ತಿದ್ದಾನೆ. ವ್ಯಕ್ತಿಯ ಹಿನ್ನೆಲೆಯಲ್ಲಿ ಕಿಟಕಿ ಇದ್ದು ಅದರ ಅರ್ಧ ಭಾಗ ಬಿಳಿಯ ಬಣ್ಣದ ಪರದೆ ಆವರಿಸಿಕೊಂಡಿದೆ. ಉಳಿದರ್ಧ ಭಾಗದಿಂದ ಹೊರಗಡೆಯ ದೃಶ್ಯವನ್ನು ತೋರಿಸಲಾಗಿದೆ. ವ್ಯಕ್ತಿಯ ಬಲಗೈಗೆ ಆಸರೆಯಾಗಿ ಆಗಿನ ಕುಸರಿ ಕೆತ್ತನೆಯಿರುವ ಮೇಜನ್ನು ಚಿತ್ರಿಸಿದ್ದಾರೆ. ಅದರ ಮೇಲೆ ನೀಲಿ ಹಾಗೂ ಕೆಂಪು ವರ್ಣದ ಪುಸ್ತಕಗಳನ್ನು ಜೋಡಿಸಲಾಗಿದೆ. ಪುಸ್ತಕಗಳ ಪಕ್ಕದಲ್ಲಿ ಗಾಜಿನ ಹೂದಾನಿ ಹಾಗೂ ಅದರಲ್ಲಿ ಬಣ್ಣ ಬಣ್ಣದ ಹೂಗಳನ್ನು ಕಾಣಬಹುದು. ಈ ಮೇಲಿನ ಚಿತ್ರವನ್ನು ಗಮನಿಸಿದಾಗ ಕಲಾವಿದರು ಕುಶಲತೆಯಿಂದ ಚಿತ್ರಿಸಿದಂತೆ ಕಂಡುಬರುತ್ತದೆ.

ಪಾಟೀಲರಿಗೆ ಛಾಯಾ ಚಿತ್ರಗಳನ್ನು ಪೇಸ್ಟಲ್‌ಗಳ ಸಹಾಯದಿಂದ ವರ್ಣಚಿತ್ರವನ್ನಾಗಿಸುವ ಕಲೆ ಕರಗತವಾಗಿತ್ತೆಂದು ತಿಳಿದಿದ್ದೇವೆ. ಅವರು ತೆಗೆದ ಅನೇಕ ಕಪ್ಪು ಬಿಳುಪಿನ ಛಾಯಾ ಚಿತ್ರಗಳು ನಿಂಬಾಳದಲ್ಲಿ ಇಂದಿಗೂ ನೋಡಲು ಸಿಗುವುದುಂಟು. ಇಲ್ಲಿ ದೊರೆತಿರುವ ಒಂದು ಕೃತಿ ಸುಮಾರು ೫ ಅಡಿಯದ್ದಾಗಿರಬೇಕು. ಈ ಕೃತಿಯಲ್ಲಿ ಒಬ್ಬ ಬಾಲಕ ತಲೆಯ ಮೇಲೆ ಕಪ್ಪು ಟೊಪ್ಪಿಗೆಯನ್ನು ಧರಿಸಿದ್ದಾನೆ. ಬಿಳಿಯ ಅಂಗಿ, ಹಾಗೂ ಬಿಳಿಯ ಪಂಚೆ, ಅಂಗಿಯ ಮೇಲೆ ಕೋಟು, ಕಾಲಲ್ಲಿ ಚಪ್ಪಲಿ ತೊಟ್ಟು ಮನೆಯ ಅಂಗಳದಲ್ಲಿ ನಿಂತಂತೆ ತೋರಿಸಲಾಗಿದೆ. ನಿಂತದ್ದು ಮನೆಯ ಅಂಗಳವಾದರೂ ಆತನ ಹಿನ್ನೆಲೆಯಲ್ಲಿ ಜೋಡಿ ಗಿಡಗಳು ಹಾಗೂ ಸರೋವರವನ್ನು

ಚಿತ್ರಿಸಿದ್ದು ಕಾಣಬಹುದು. ಇಲ್ಲಿ ತಾಂತ್ರಿಕತೆಯನ್ನು ಬಳಸಿ ಕಲಾವಿದರು, ಒಂದು ಕೈಯನ್ನು ಆಕೃತಿಯ ಹಿಂಬದಿಯಲ್ಲಿರುವ ಅಡಗೋಡೆಯ ಮೇಲೆ ಇದ್ದಂತೆ ಚಿತ್ರಿಸಿದ್ದಾರೆ. ಚಿತ್ರದಲ್ಲಿರುವ ಆಕೃತಿ ಎರಡು ಕೈಗಳನ್ನು ಹೊಂದಿದ್ದರೂ ಇನ್ನೊಂದು ಕೈಯನ್ನು ಅಲ್ಲಿ ಚಿತ್ರಿಸಿದ್ದರ ಔಚಿತ್ಯವೇನು? ಎಂಬುದು ಕಲಾವಿದರ ಭಾವನೆಗೆ ಬಿಟ್ಟದ್ದು, ಆಕೃತಿಯ ಮುಖವನ್ನು ಹಾಗೂ ವೃಕ್ಷಗಳನ್ನು ಮತ್ತು ಸರೋವರವನ್ನು ಪೇಸ್ಟಲ್ ವರ್ಣಮಯವಾಗಿ ಮಾಡಿ ಉಳಿದ ಭಾಗವನ್ನು ಯಥಾ ಸ್ಥಿತಿಯಲ್ಲಿ ಇಟ್ಟಿದ್ದಾರೆ. ಈ ಕೃತಿಯನ್ನು ನೋಡುತ್ತಿದ್ದರೆ ಇದು ವರ್ಣಕೃತಿಯೋ ಅಥವಾ ಕಪ್ಪು ಬಿಳುಪಿನ ಚಿತ್ರವೋ ಎಂದು ಗೊಂದಲಕ್ಕೀಡಾಗುವ ಸಂಭವವುಂಟು.

## ಪೂಜಾರಿಯ ಭಾವಚಿತ್ರ

ದಿ ಐಡಿಯಲ್ ಫೈನ್ ಆರ್ಟ್ ಸಂಸ್ಥೆಯ ಸಂಗ್ರಹದಲ್ಲಿರುವ ಈ ಕಲಾಕೃತಿ ೧೯೩೩ರಲ್ಲಿ ಪಾಟೀಲರು ರಚಿಸಿದ್ದುಂಟು. ಇದರ ಅಳತೆ ೧೫" x ೨೦" ಇದ್ದು. ಇದನ್ನು ಬಿಳಿ ಹಾಳೆಯ ಮೇಲೆ ಜಲ ವರ್ಣದಿಂದ ರಚಿಸಿದ್ದಾರೆ. ಸುಮಾರು ಅರವತ್ತು ವರ್ಷ ವಯಸ್ಸಿನ ವ್ಯಕ್ತಿಯನ್ನು ಮಾಡೆಲ್ ಆಗಿ ಕೂಡಿಸಿ ಈ ಕೃತಿಯನ್ನು ರಚಿಸಿರಬಹುದು. ಈ ಕೃತಿಯಲ್ಲಿ ಕೇವಲ ಎರಡು ಬಣ್ಣಗಳನ್ನು ಬಳಸಿದ್ದು ಕಂಡು ಬರುತ್ತದೆ. ಒಂದು ವರ್ಣ ಬಿಳಿಯದಾದರೆ ಇನ್ನೊಂದು ಕಂದು ಬಣ್ಣದ್ದು. ಇಲ್ಲಿ ಚಿತ್ರಿಸಿರುವ ವ್ಯಕ್ತಿಯ ಭಾವನೆ ನೋಡುಗನಿಗೆ ಮೊದಲ ನೋಟಕ್ಕೆ ಸೆಳೆಯುವಲ್ಲಿ ಯಶಸ್ವಿಯಾಗುತ್ತದೆ. ಈ ಕೃತಿಯ ತಲೆ ಸ್ವಲ್ಪ ಪಕ್ಕಕ್ಕೆ ವಾಲಿದಂತೆ ತೋರುತ್ತದೆ. ಅರೆ ತೆರೆದ ಕಂಗಳು, ಗುಳಿಬಿದ್ದ ಕೆನ್ನೆ ದಟ್ಟವಾದ

ಗಡ್ಡ ಹಾಗೂ ಮೀಸೆ, ಬೋಳು ತಲೆ ಹಣೆಯನ್ನು ಪೂರ್ತಿಯಾಗಿ ಆವರಿಸಿದ ನಾಮ, ಕಿವಿಯ ಮೇಲಿನ ಬಿಳಿಯ ರೋಮ, ಬೆತ್ತಲೆ ದೇಹ ಭಾಗ.

**ಕಲಾವಿದರ ಕಲಾ ಪ್ರದರ್ಶನಗಳು**

ಕಲಾ ಪ್ರದರ್ಶನಗಳು ಸಾರ್ವಜನಿಕರ ಹಾಗೂ ಕಲಾವಿದರ ಮಧ್ಯೆ ಸಂಬಂಧ ಬೆಸೆಯುವ ಸೇತುವೆ ಇದ್ದಂತೆ. ಕಲೆಯನ್ನು ಕೇವಲ ಕೆಲವೇ ವ್ಯಕ್ತಿಗಳ ರಾಜಮಹಾರಾಜರ ಹಾಗೂ ಶ್ರೀಮಂತ ವರ್ಗದವರಿಗೆ ಸೀಮಿತವಾಗಿದ್ದ ಅಂದಿನ ಕಾಲದಲ್ಲಿ ಕಲೆಯನ್ನು ಸಾರ್ವಜನಿಕವಾಗಿ ಪ್ರದರ್ಶಿಸಿ ಜನ ಮೆಚ್ಚುಗೆಗೆ ಪಾಟೀಲರು ಪಾತ್ರರಾಗಿದ್ದರು. ಹೈದ್ರಾಬಾದ, ಮುಂಬೈ, ಸೋಲಾಪುರ, ಬರೋಡಾ ಹಾಗೂ ಕಲಬುರ್ಗಿಯಲ್ಲಿ ಅನೇಕ ಪ್ರದರ್ಶನಗಳನ್ನು ಇವರು ಕೈಗೊಂಡಿದ್ದರು. ಸ್ನೇಹಮಯಿ ಹಾಗೂ ಸರಳ ಜೀವಿಯಾದ ಪಾಟೀಲರು ಯಾವತ್ತೂ ತಮ್ಮ ಕಲೆಯನ್ನು ಕೆಲವರಿಗೆ ಮಾತ್ರ ಸೀಮಿತ ಮಾಡಿದವರಲ್ಲ. ಇವರು ಕೃತಿ ರಚಿಸುವಾಗ ಸುತ್ತಮುತ್ತಲಿನ ಜನರಿಗೆ ಅದನ್ನು ತೋರಿಸಿ ಆ ಕಲಾಕೃತಿಯ ಬಗ್ಗೆ ಅವರಿಗೆ ತಮ್ಮ ವಿಚಾರಗಳನ್ನು ವ್ಯಕ್ತಪಡಿಸಲು ಕೋರುತ್ತಿದ್ದರಂತೆ. ಈ ರೀತಿಯಾಗುವುದರಿಂದ ಜನರಲ್ಲಿ ಕಲೆಯ ಬಗ್ಗೆ ಆಸಕ್ತಿ ಮೂಡುವುದಲ್ಲದೆ, ಮೂಡಿಸಬಹುದೆಂದು ಕಲಾವಿದರು ನಂಬಿದ್ದರು.

ಪಾಟೀಲರು ಹೈದ್ರಾಬಾದಿನಲ್ಲಿ ಗುಂಪು ಪ್ರದರ್ಶನವೊಂದನ್ನು ಕೈಗೊಂಡಿದ್ದರೆಂದು ಅವರ ಮನೆಯಲ್ಲಿ ದೊರೆತ ಛಾಯಾ ಚಿತ್ರವನ್ನು ನೋಡಿದಾಗ ಅರಿವಾಗುತ್ತದೆ.

ಸ್ವಾತಂತ್ರ್ಯಕ್ಕೋಸ್ಕರ ಹೋರಾಡುತ್ತಿರುವ ಅಂದಿನ ದಿನಗಳಲ್ಲಿ ಪಾಟೀಲರು ಚಿತ್ರ ಕಲೆಯ ಮುಖಾಂತರ ಅಪರೋಕ್ಷವಾಗಿ ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ಫೂರ್ತಿ ತುಂಬಿದ್ದಾರೆ. ಪ್ರಚಾರ ಮಾಧ್ಯಮಗಳ ಕೊರತೆ ಇದ್ದ ಅಂದಿನ ಸಂದರ್ಭದಲ್ಲಿ ಚಿತ್ರ ಕಲೆ ಅತ್ಯಂತ ಪ್ರಭಾವಿ ಮಾಧ್ಯಮವಾಗಿತ್ತು. ಅದಕ್ಕೆಂದೆ, ಪಾಟೀಲರು ಈ ಮಾಧ್ಯಮವನ್ನು ಬಳಸಿದ್ದು, ಸ್ವಾತಂತ್ರ್ಯ ಪ್ರಜ್ಞೆ ಜನರಲ್ಲಿ ಮೂಡುತ್ತಿದ್ದ ಸಂದರ್ಭದಲ್ಲಿ ಈ ಕಲಾವಿದರು ಸ್ವಾತಂತ್ರ್ಯ ಹೋರಾಟಗಾರರ ಹಾಗೂ ಅದಕ್ಕೆ ಸಂಬಂಧಪಟ್ಟ ಅನೇಕ ಘಟನೆಗಳ ಚಿತ್ರಗಳನ್ನು ರಚಿಸಿ ಜಾತ್ರೆಗಳಲ್ಲಿ ಉತ್ಸವಗಳಲ್ಲಿ, ಜನನಿಬಿಡ ಸ್ಥಳಗಳಲ್ಲಿ ಪ್ರದರ್ಶಿಸಿ ಜನರಲ್ಲಿ ಒಂದು ರೀತಿಯ ಜಾಗ್ರತೆಯನ್ನು ಉಂಟು ಮಾಡುತ್ತಿದ್ದರು.

ಕಲಬುರ್ಗಿಯ ಶರಣ ಬಸವೇಶ್ವರ ಜಾತ್ರೆ ಅತ್ಯಂತ ಅದ್ದೂರಿ ಹಾಗೂ ಜನದಟ್ಟಣೆಯಿಂದ ಕೂಡಿರುತ್ತದೆ. ಇಂದೂ ಸಹ ಈ ಜಾತ್ರೆಯಲ್ಲಿ ಲಕ್ಷೋಪ ಲಕ್ಷ ಜನರು ಸೇರುತ್ತಾರೆ. ತಮ್ಮ ಕಲೆಯ ಮೂಲಕ ಜನರಲ್ಲಿ ಸ್ವಾತಂತ್ರ್ಯದ ಅರಿವು ಮೂಡಿಸಬಹುದೆಂಬ ದೃಷ್ಟಿಯಿಂದ ಕಲಾವಿದರು ಇಲ್ಲಿ ಸ್ವಾತಂತ್ರ್ಯ ಸಂಗ್ರಾಮದ ವಿಷಯಗಳುಳ್ಳ ಪ್ರದರ್ಶನವೊಂದನ್ನು ಏರ್ಪಡಿಸಿದ್ದರು. ಆದರೆ ಇವರ ಚಿತ್ರಗಳಿಂದ ಪ್ರಭಾವಿತರಾಗಿ ಜನ ದಂಗೆ ಏದ್ದಾರು ಎಂಬ ಭೀತಿಯಿಂದ ಬ್ರಿಟಿಷ್ ಸರಕಾರ ಪೋಲೀಸ್ ಪಡೆಗಳನ್ನು ಕಳುಹಿಸಿ ಆ ಪ್ರದರ್ಶನವನ್ನು ಧ್ವಂಸ ಮಾಡಿಸಿದರಂತೆ. ಕಲಾವಿದರು ಅಲ್ಲಿಂದ ತಪ್ಪಿಸಿಕೊಂಡು ಹೋಗಿ ಮುಂದೆ ಅದೇ ಸ್ಥಳದಲ್ಲಿ ೧೯೫೭ರಲ್ಲಿ ತಮ್ಮ ಚಿತ್ರಗಳ ಪ್ರದರ್ಶನ

ಏರ್ಪಡಿಸಿದ್ದರಂತೆ. ಇದು ಪಾಟೀಲರ ಸ್ವಾತಂತ್ರ್ಯ ಪ್ರೇಮಕ್ಕೆ ಉದಾಹರಣೆಯಾಗಿದೆ.

## ಮಾರ್ತಾಂಡ ಖಂಡೇರಾವ್‌ರವರ ಚಿತ್ರ

ಈ ಕಲಾ ಕೃತಿಯನ್ನು ಪಾಟೀಲರು ೧೯೨೭ರ ಏಪ್ರೀಲ್ ೧೫ರಂದು ಪೂರ್ತಿಗೊಳಿಸಿದ್ದಂತೆ ಕಂಡು ಬರುತ್ತದೆ. ತೈಲವರ್ಣದಿಂದ ಸಾಕಾರಗೊಳಿಸಿದ ಈ ಕಲಾಕೃತಿಯಲ್ಲಿರುವ ವ್ಯಕ್ತಿ ಬೀದರ್ ಜಿಲ್ಲೆಯ ಪ್ರಸಿದ್ಧ ಕ್ಷೇತ್ರವಾದ ಮಾಣಿಕ ನಗರದ ಮಾರ್ತಾಂಡ ಪ್ರಭುಗಳು. ಇಲ್ಲಿ ಪ್ರಭುಗಳು ತಮ್ಮ ಆಸನದ ಮೇಲೆ ಕುಳಿತಿದ್ದಾರೆ. ಅವರ ತಲೆಯ ಮೇಲೆ ನಕ್ಷೆಯಿರುವ ಬಂಗಾರದ ಟೊಪ್ಪಿಗೆ ಇದೆ. ಇವರು ಮೈಮೇಲೆ ದಪ್ಪವಾದ ಕೋಟನ್ನು ತೊಟ್ಟಿದ್ದಾರೆ. ನೋಡುಗನಿಗೆ ಕೋಟಿನ ದಪ್ಪದ ಅರಿವಾಗುವಂತೆ ಕಲಾವಿದರು ಚಿತ್ರಿಸುವಲ್ಲಿ ಯಶಸ್ವಿಯಾಗಿದ್ದಾರೆ. ಪಾಟೀಲರು ಅಕಾಡೆಮಿಕ್ ಶೈಲಿಯಲ್ಲಿ ನುರಿತವರಾಗಿದ್ದರಿಂದ ಇಂತಹ ಚಿತ್ರಗಳಿಗೆ ಜೀವ ತುಂಬುವಲ್ಲಿ ಹಿಂದೆ ಬೀಳಲಿಲ್ಲ ಎಂಬುದು ನಮಗರಿವಾಗುತ್ತದೆ. ಪ್ರಭುಗಳ ಹಿಂದೆ ಇರುವ ದಿಂಬು, ಹಾಗೂ ಕೆಳಗಡೆ ಹಾಸಿರುವ ಕಂಬಳಿಗಳೆರಡರಲ್ಲಿಯೂ ನಕ್ಷೆಯನ್ನು ಕಾಣಬಹುದು. ಪ್ರಸನ್ನತೆಯ ಮುಖಭಾವವನ್ನು ಹೊಂದಿರುವ ಪ್ರಭುಗಳ ಈ ಚಿತ್ರವನ್ನು ಅತೀ ನಾಜೂಕೂತನದಿಂದ ಚಿತ್ರಿಸಿದಂತೆ ಭಾಸವಾಗುತ್ತದೆ.

## ಸಿಂಧಿ ವ್ಯಕ್ತಿಯ ಭಾವಚಿತ್ರ

ಈ ಕಲಾಕೃತಿ ಕೂಡ ಕಲಬುರ್ಗಿಯ ದಿ ಐಡಿಯಲ್ ಫೈನ್

ಆರ್ಟ್ ಸಂಸ್ಥೆಯ ಸಂಗ್ರಹದಲ್ಲಿದೆ. ಈ ಕೃತಿ ಸುಮಾರು ಒಂದೂವರೆ ಅಡಿ ಅಗಲ ಹಾಗೂ ಎರಡು ಅಡಿ ಉದ್ದವಾಗಿದ್ದು ಚಿತ್ರದಲ್ಲಿರುವ ವ್ಯಕ್ತಿ ಸಿಂಧಿ ಜನಾಂಗದವನಾಗಿದ್ದಾನೆಂದು ಆತನು ತೊಟ್ಟ ಉಡಿಗೆತೊಡಿಗೆಗಳಿಂದ ತಿಳಿಯುತ್ತದೆ. ತಲೆಯ ಮೇಲಿನ ಪೇಠ, ತಲೆಯ ಹಿಂದೆ ಇಳಿಬಿಟ್ಟ ಬಟ್ಟೆ ಹಾಗೂ ಆತನು ಧರಿಸಿದ ಬಟ್ಟೆ ಇವೆಲ್ಲವುಗಳ ನಿರಿಗೆ ತುಂಬಾ ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಬಿಳಿಯ ಹಾಗೂ ಕಂದು ಬಣ್ಣಗಳ ಮಿಶ್ರಣದಿಂದ ರೂಪಿಸಿರುವ ಈ ಉಡುಪಿನಲ್ಲಿ ನೆರಳು ಹಾಗೂ ಬೆಳಕಿನ ವಿಂಗಡಣೆ ಮೆಚ್ಚುವಂತಹದು. ಕಲಾವಿದರು ಕೆಲವು ಭಾವಚಿತ್ರಗಳಲ್ಲಿ ತೈಲವರ್ಣವನ್ನು ಸೌಮ್ಯವಾಗಿ ಬಳಸಿದ್ದಾರೆ. ಇಲ್ಲಿರುವ ಚಿತ್ರದಲ್ಲಿ ಒರಟುತನದ ಛಾಯೆ ಕಂಡುಬರುತ್ತದೆ. ಬಿಳಿ ಹಾಗೂ ಕಂದು ಬಣ್ಣಗಳಿಂದ ಪೂರ್ತಿಗೊಂಡ ಕಲಾಕೃತಿಯಲ್ಲಿ ವರ್ಣಗಳೆರಡರ ಸಾಮರಸ್ಯ ಕಾಣಬಹುದು.

## ಮಹಿಳೆಯ ಭಾವಚಿತ್ರ

ಈ ಚಿತ್ರದಲ್ಲಿರುವ ಮಹಿಳೆಯ ಮುಖದಲ್ಲಿ ಮುಗ್ಧತೆ ಇದೆ. ಬಣ್ಣವನ್ನು ತೆಳುವಾಗಿ ಲೇಪಿಸಿರುವುದರಿಂದಲೋ ಏನೋ ಕೃತಿಯಲ್ಲಿ 'ಸ್ಟ್ರಕ್ಚರ್' ಎದ್ದು ಕಾಣುತ್ತಿದೆ. ಕೊರಳಲ್ಲಿ ಧರಿಸಿದ ಹಾರ ಚಿನ್ನದೆಂದು ಗುರುತಿಸಬಹುದು. ಪಾಟೀಲರು ವ್ಯಕ್ತಿ ಚಿತ್ರಗಳನ್ನು ರಚಿಸಿದಾಗ ಅವರು ಧರಿಸಿದ ವಸ್ತ್ರಗಳಿಗಾಗಲೀ ಅಥವಾ ಒಡವೆಗಳಿಗಾಗಲಿ ತುಂಬಾ ಮಹತ್ವ ನೀಡುತ್ತಿದ್ದರು. ಒಮ್ಮೆ ಕಣಜಿಯಲ್ಲಿ ಮಹಿಳೆಯ ಚಿತ್ರವನ್ನು ಚಿತ್ರಿಸಿದರಂತೆ. ಅವಳು ಕಿವಿಯಲ್ಲಿ ಮುತ್ತುಗಳಿರುವ ಓಲೆಗಳನ್ನು ಧರಿಸಿದ್ದಳಂತೆ. ಆ ಚಿತ್ರವನ್ನು ನೋಡಿ ವ್ಯಾಪಾರಿಯೊಬ್ಬರು ಚಿತ್ರದಲ್ಲಿರುವ

